ಕನ್ನಡ ಕಾವ್ಯಮಾಲೆ—೬೨

# ವಿಕಟಕವಿ ವಿಜಯ

(ರಾಜಕೀಯ ಪ್ರಹಸನ)

ಪು. ತಿ. ನರಸಿಂಹಾಚಾರ್

ಶ್ರೀ ಡಿ. ವಿ. ಗುಂಡಪ್ಪನವರ
ಮುನ್ನುಡಿಯೊಡನೆ



ಪ್ರಕಾಶಕರು
ಕಾವ್ಯಾಲಯ
ಮೈಸೂರು

# ಮುನ್ನುಡಿ

ಉತ್ತಮ ಜಾತಿಯ ವೀಣೆ ಗಾಳಿಯಾಡುವ ಕಡೆ ಇರುವಾಗ, ಯಾರ ಬೆರಳೂ ಸೋಕದಿದ್ದರೂ ಅದರ ತಂತಿಯಿಂದ ನಾದ ಹೊರಡುತ್ತದೆ. ಗಾಳಿ ಹೊಡೆದಾಗ ನಾದ ಕೊಡದಿರುವುದು ಆ ತಂತಿಗೆ ಸಾಧ್ಯವಿಲ್ಲ. ಶ್ರೀಮಾನ್ ನರಸಿಂಹಾಚಾರ್ಯರವರ ಮನಸ್ಸು ಅದರಂತೆ ವಾತಾವರಣ ಸಲ್ಲಾಪಿಯಾದದ್ದು. ಸುತ್ತಮುತ್ತಣ ಸಂದರ್ಭಗಳು ಕಾವೇರಿದಾಗ ಕೆರಳಿ ಪ್ರತ್ಯುಕ್ತಿ ಕೊಡುತ್ತಿರುವುದು ಕವಿ ಹೃದಯದ ಸ್ವಭಾವವೆಂದು ಕಾವ್ಯ ತತ್ತ್ವಜ್ಞರು ಹೇಳುತ್ತಾರೆ. ಪರಿಸರ ಸಂವೇದನೆ, ಪ್ರತ್ಯುದ್ಭಾವನೆ–ಈ ಎರಡು ಶಕ್ತಿಗಳೂ ಶ್ರೀ ನರಸಿಂಹಾಚಾರ್ಯರ ಹೃದಯಕ್ಕೆ ಸಹಜವಾಗಿ ಬಂದಿರುವ ವರಗಳು. ಇಂದಿನ ಕನ್ನಡ ಕವಿಗಣದಲ್ಲಿ ಅವರು ಅಗ್ರಪಂಕ್ತಿಯಲ್ಲಿರತಕ್ಕವರು. ಲಲಿತ ಸುಕುಮಾರ ಭಾವಗಳನ್ನು ಮೃದುಮಧುರ ಪದಗಳಿಂದ ಧ್ವನಿತವಾಗಿಸುವುದು ಅವರ ಕೌಶಲ ವಿಶೇಷ. ನಮ್ಮ ದೇಶದ ಈಚಿನ ರಾಜಕೀಯ ವಿಪ್ಲವದಿಂದ ಸಾಮಾನ್ಯ ಪ್ರೇಕ್ಷಕರಲ್ಲಿ ಉದಿಸಿದ ಭಾವನಾನುಭವಗಳು ಶ್ರೀ ನರಸಿಂಹಾಚಾರ್ಯರಲ್ಲಿ ಉದಿಸಿದ್ದೂ, ಆ ಅಂತರಂಗ ದರ್ಶನಗಳನ್ನು ಅವರು ವಾಙ್ಮಯ ರೂಪದಲ್ಲಿ ಅವತಾರಗೊಳಿಸ ಹೊರಟದ್ದೂ ಸ್ವಾಭಾವಿಕವಾಗಿಯೇ ಇವೆ.

ಈ ನಾಟಕದಲ್ಲಿ ಶ್ರೀ ನರಸಿಂಹಾಚಾರ್ಯರು ಕ್ರಿ.ಶ. ೧೯೪೨ ರಿಂದ ೧೯೪೭ರ ವರೆಗಿನ ನಮ್ಮ ದೇಶದ ರಾಜಕೀಯ ಕೋಲಾಹಲವನ್ನು ಕವಿ ಸಹಜವಾದ ರೀತಿಯಲ್ಲಿ ಚಿತ್ರಣ ಮಾಡಿದ್ದಾರೆ. ಒಂದಾನೊಂದು ದೇಶೀಯ ಸಂಸ್ಥಾನದಲ್ಲಿಯ ದೇಶ ಹಿತೈಷಿಯಾದ ರಾಜನು ಭಾರತ ಸ್ವಾತಂತ್ರ್ಯಕ್ಕಾಗಿಯೂ ಪ್ರಜಾಪರವಾಧಿಕಾರಕ್ಕಾಗಿಯೂ ನಡೆದ ಜನ ಸಮಾರಂಭವನ್ನು ಎಂಥ ದೃಕ್ಪಥದಿಂದ ನೋಡಿದನು? ಆತನೆದುರಿಸಬೇಕಾಗಿದ್ದ ನಾನಾ ಜನಪ್ರಮುಖರು ಎಂಥೆಂಥವರು? ಆತನಿಗೆ ಅಧಿಕಾರದಲ್ಲಿ ಅನಿವಾರ್ಯ ಸಹಭಾಗಿಯಾಗಿದ್ದ ಬ್ರಿಟಿಷ್ ಪ್ರತಿನಿಧಿಯ ನೀತಿ

ಯೆಂಥಾದ್ದು ? ಆ ರಾಜನ ಆಪ್ತಸಚಿವನಾಗಿದ್ದ ವಿಕಟಕವಿಯ ನ್ಯಾಯ ವೃಷ್ಟಿಯೆಂಥಾದ್ದು ?—ಈ ವಿಚಾರಗಳನ್ನು ಶ್ರೀ ನರಸಿಂಹಾಚಾರ್ಯರವರು ಪ್ರತಿಬಿಂಬಿಸಯತ್ನಿಸಿದ್ದಾರೆ. ಇಂಥಾ ಪ್ರಯತ್ನವು ರಸಿಕರಿಗೆ ಕುತೂಹಲ ಜನಕವಾಗದೆ ಇರದು.

ಒಟ್ಟಿನಲ್ಲಿ ಶ್ರೀ ನರಸಿಂಹಾಚಾರ್ಯರ ಈ ಪ್ರಯತ್ನ ಪರೀಕ್ಷಾ ಪ್ರಯೋಗರೂಪದ್ದು ಎಂದು ಹೇಳಿದರೆ ಅದರ ಬೆಲೆಗೆ ಕುಂದೇನೂ ಆಗಲಾರದು. ರಾಜಕೀಯ ವಸ್ತುವಿನಿಂದ ರಸಪಾಕವನ್ನಿಳಿಸುವ ಯೋಚನೆ ಸಾಹಸವೇ. ಆ ವಸ್ತು ಬಹುಭಾಗದಲ್ಲಿ ಮೃದುಮಧುರವಾದದ್ದಲ್ಲ. ಅದರಲ್ಲಿಯೂ ಪ್ರಜಾ ಸಂಕ್ಷೋಭೆಯ ರಾಜಕೀಯ—ಒಳಗಡೆಯಿಂದ ನೋಡುವ ಕಣ್ಣಿಗಂತೂ—ವೀರರಂಗವೆನಿಸುವುದಕ್ಕಿಂತ ಹೆಚ್ಚಾಗಿ ಬೀಭತ್ಸ ಭೂಮಿಯೆಂದೆನಿಸುತ್ತದೆ. ೧೯೪೭ರ ದೃಶ್ಯದ ರಂಗುಗಳು ೧೯೪೯ರಲ್ಲಿ ಏನಾಗಿವೆ? ರಾಜಕೀಯದಲ್ಲಿ ನಾನು ಅದೃಷ್ಟಶಾಲಿಯಲ್ಲ. ನನ್ನಂಥವನ ಮಾತು ಕೃತಕಾರ್ಯರಾದವರಿಗೆ ಅಸಮರ್ಥ ಪ್ರಲಾಪವೆನಿಸಬಹುದು. ಆದರೆ ನಮ್ಮ ರಾಜಕೀಯದಲ್ಲಿ ಭಗ್ನಾಶರಾದವರು ಇಂದು ಬಹು ಮಂದಿಯಿದ್ದಾರೆ. ಅಂಥವರ ದೃಷ್ಟಿ ಅಪ್ರಕೃತವಲ್ಲದಿದ್ದಲ್ಲಿ, ನಮ್ಮ ಹೊಸ ಸ್ವಾತಂತ್ರ್ಯದ ಹೊಳಪೆಂಥಾದ್ದೋ ನಮ್ಮ ಸಾಮಾನ್ಯ ಜನಕ್ಕೆ ಇನ್ನೂ ಗೋಚರವಾಗಿಲ್ಲವೆಂದೇ ಹೇಳಬೇಕಾಗಿದೆ. ಪ್ರಜಾಪ್ರಭುತ್ವಕ್ಕೆಂದು ಪೊಲೀಸಿನವರಿಂದ ಏಟು ತಿಂದವರೂ, ಜೈಲಿಗೆ ಹೋದವರೂ, ಜುಲ್ಮಾನೆ ತೆತ್ತವರೂ, ಉಪವಾಸಮಾಡಿದವರೂ, ವಿದ್ಯೆ ಕಳೆದುಕೊಂಡವರೂ, ಕಸಬು ಕೈಬಿಟ್ಟವರೂ—ಗಂಡು ಮಕ್ಕಳೂ ಹೆಣ್ಣು ಮಕ್ಕಳೂ ಮುದುಕರೂ ಗೃಹಕೃತ್ಯದ ನೆಮ್ಮದಿ ತೊರೆದವರೂ—ಈ ಹೊತ್ತು ಯಾವ ಸೌಭಾಗ್ಯವನ್ನು ಕಂಡಿದ್ದಾರೆ? ಮಂತ್ರಿಪದವಿಗೆ ಬಂದವರು ಆ ಉಪಕಾರಿಗಳನ್ನು ಹೇಗೆ ನೆನಸಿಕೊಳ್ಳುತ್ತಿದ್ದಾರೆ? ಶ್ರೀ ನರಸಿಂಹಾಚಾರ್ಯರು ಗುಡ್ಡದಮೇಲೆ ನಿಂತು ಊರ ಸಂತೆಯನ್ನು ನೋಡುವವರು. ಅವರ ಕಣ್ಣು ಕಿವಿಗಳಿಗೆ ಬಗೆಬಗೆಯ ಬಣ್ಣಗಳೂ ನಡಿಗೆಗಳೂ ಕೂಗುಗಳೂ ತಿಳಿಯಬರುತ್ತವೆ. ಸಂತೆಯೊಳಗೆ ಸುತ್ತಾಡುವವರಿಗೆ ಆಗುವ ಮೈಯೊತ್ತುಗಳೂ ಮೈಲಿಗೆಗಳೂ ಅವರನ್ನು ಸೋಕ

ಲಾರವು. ಅವರು ಜನನಾಯಕರಿಂದ ಹಾಡಿಸುವ ಹಾಡುಗಳನ್ನು ನೋಡಿರಿ (ಪುಟ.೫೭). ಮೇರುಪರ್ವತದಂಥ ತತ್ತ್ವಗಳು, ಸಮುದ್ರದಂಥ ಆಶಯಗಳು, ಚಿನ್ನರನ್ನಗಳ ಕನಸುಗಳು. ವಾಚಕರೆಲ್ಲ ಕೇವಲ ಕವಿಗಳೇ ಆಗಿದ್ದಲ್ಲಿ ಅವರಿಗೆ ಬೇರೆ ಇನ್ನೇನೂ ಬೇಕೆನಿಸದು. ಆದರೆ ವಾಚಕರಲ್ಲಿ ಬಹುಮಂದಿಯ ಕವಿಮನಸ್ಕತೆ ಒಂದೆರಡು ಕ್ಷಣಗಳಷ್ಟರದು. ಆ ದಿವ್ಯಕ್ಷಣಗಳು ಹಾರಿಹೋದಮೇಲೆ ವಾಚಕನು ಸಾಮಾನ್ಯ ಲೋಕವನ್ನು ನೋಡಿ–"ಎಲ್ಲಿ ಆ ಮೇರು?"ಎನ್ನುತ್ತಾನೆ. ನಮ್ಮ ದಿನದಿನದ ವಾಸ್ತವಿಕ ಪ್ರಪಂಚದ ತಳಹದಿಯಮೇಲೆ ಕಟ್ಟಿದ ಕಾಲ್ಪನಿಕ ಸ್ವರ್ಗದ ಗತಿ ಅಷ್ಟೇ! ರಾಜಕೀಯ ಒರಟು ವ್ಯಾಪಾರ; ಕಾವ್ಯ ನವುರು ಸಂಸ್ಕಾರ. ರಾಜಕೀಯ ನಾಯ ಬಾಲ; ಕಾವ್ಯ ಆನೆಯ ಸೊಂಡಿಲು.

ನಮ್ಮ ರಾಜಕೀಯದ ಕಥೆ ಎರಡು ಪ್ರಕರಣಗಳುಳ್ಳದ್ದು. ಒಂದು ವಿದೇಶೀಯರನ್ನೋಡಿಸುವ ಸಂರಂಭವು; ಇನ್ನೊಂದು ಸ್ವದೇಶೀಯರು ತಮ್ಮನ್ನು ತಾವಾಳಿಕೊಳ್ಳುವ ವಿಚಕ್ಷಣೆಯದು. ಮೊದಲನೆಯದರಲ್ಲಿ ಧರ್ಮಸ್ಮರಣೆ, ನ್ಯಾಯೋತ್ಸಾಹ, ಆತ್ಮಸಮರ್ಪಣೆ—ಇಂಥ ಧೀರಲಕ್ಷಣಗಳು ನೈಜವಾಗಿರುತ್ತವೆ. ಎರಡನೆಯದರಲ್ಲಿ ಆ ಲಕ್ಷಣಗಳಿಗೆ ಅಷ್ಟು ಆಸ್ಪದ ದೊರೆತೀತೆ? ಒಳ್ಳೆಯ ಬತ್ತವನ್ನು ಬೆಳೆದು ಕೆಟ್ಟ ಕೂಳನ್ನು ತಿನ್ನುವುದು ದೇಶದ ಪಾಡಾಗಬೇಕೆ?

ರಾಜಕೀಯದಿಂದ ಮನುಷ್ಯ ಸ್ವಭಾವ ಹೇಗೆ ಹೇಗೆ ವಕ್ರಿತವಾಗಬಹುದೆಂಬುದನ್ನು ಷೇಕ್ಸ್‌ಪಿಯರ್ ಕವಿ ನಾಲ್ಕಾರು ಕಡೆ ತೋರಿಸಿದ್ದಾನೆ. ಆಶೆ ಔದಾರ್ಯಗಳ ತಿಕ್ಕಾಟ, ಸರಳತೆ ಕುಟಿಲತೆಗಳ ಚಲ್ಲಾಟ ದರ್ಪದಾಕ್ಷಿಣ್ಯಗಳ ಪರದಾಟ—ಇವು ರಾಜಕೀಯದ ವೇಧಕ ದೃಶ್ಯಗಳು. ನಳಚಕ್ರವರ್ತಿಯನ್ನು ಕಚ್ಚಿ ರೂಪುಗೆಡಿಸಿದ ಕಾರ್ಕೋಟಕನು ರಾಜಕೀಯದಲ್ಲವತರಿಸಿ ಅವಿತುಕೊಂಡಿದ್ದಾನೋ ಎನ್ನಿಸುತ್ತದೆ—ವಸ್ತುಸ್ಥಿತಿಯನ್ನು ನೋಡಿದರೆ.

ಮನಸ್ಸಿಗೆ ಹಾಗೆ ಜುಗುಪ್ಸೆಯಾದಾಗ "ವಿಕಟಕವಿ ವಿಜಯ" ವನ್ನೋದಿದರೆ –"ಎಂಥ ಶಿಖರಕ್ಕೆ ಹಾರಲೆಗರಿದವರು ಎಂಥ ಹಳ್ಳಕ್ಕೆ ಇಳಿದಿದ್ದಾರೆ" ಎಂಬುದು ವಿಶದವಾಗಿ ತೋರೀತು; ಹಾಗೆಯೇ ಅದರ

ಚಿಂತನಾವಸರದಲ್ಲಿ "ಜನದ ಮೂಲ ಸಂಕಲ್ಪವಂತೂ ಒಳ್ಳೆಯದು ಅವರ ಉತ್ಸಾಹ ಪೌರುಷಗಳಂತೂ ಆಶಾಕಾರಕವಾದುವು! ಆ ಜನ ಶಕ್ತಿ ದೊಡ್ಡದು!" ಎಂಬಷ್ಟು ಮಿತಸಮಾಧಾನವಾದರೂ ತಲೆದೋರ ಬಹುದು.

ನಮ್ಮ ರಾಜಕೀಯ ಪ್ರಮುಖರು ಸಾಹಿತ್ಯವಿಶ್ವಾಸಿಗಳೆಂದು ನನಗೆ ತಿಳಿದುಬಂದಿದ್ದಿದ್ದರೆ ಶ್ರೀ ನರಸಿಂಹಾಚಾರ್ಯರು ಒದಗಿಸಿರುವ ಕನ್ನಡಿ ಯಲ್ಲಿ ಅವರು ಆಗಾಗ ಮುಖನೋಡಿಕೊಂಡಾರೆಂದೂ ಅದರಿಂದ ನಮ ಗೆಲ್ಲ ಉಪಕಾರವಾದೀತೆಂದೂ ನಂಬಬಹುದಾಗಿತ್ತು. ಆದರೆ ಹೃಷ್ಟ ಪುಷ್ಟನಾದ ಭೋಗಪುರುಷನಿಗೆ ವೈದ್ಯಪಥ್ಯದಲ್ಲಿರುವ ಶ್ರದ್ಧೆಯೆಂಥಾದ್ದೋ ನಮ್ಮ ಪ್ರಜಾನಾಯಕರಿಗೆ ಪುಸ್ತಕಸಾಹಿತ್ಯದಲ್ಲಿರುವ ಆದರ ಅಂಥಾದ್ದು. ಅಧಿಕಾರ ಪದವಿಯ ದಾರಿ ಗ್ರಂಥದಲ್ಲಿ ಕಾಣಬಾರದೆಂದು ಅವರು ಮನ ಗಂಡಿದ್ದಾರೆ. ಹಾಗಿರಲಾಗಿ, "ವಿಕಟಕವಿ ವಿಜಯ"ವನ್ನೋದಿ ಪ್ರತಿ ಫಲ ಕೊಡುವವರು ಬಹುಶಃ ನನ್ನಂತೆ ನಿಟ್ಟುಸಿರಿನ ಹೊರತು ಬೇರೆ ಯಾವ ಸಂಪತ್ತೂ ಇಲ್ಲದವರೇ ಎಂದು ತೋರುತ್ತದೆ. ಅಷ್ಟರಿಂದಲೇ ಶ್ರೀ ನರಸಿಂಹಾಚಾರ್ಯರು ತೃಪ್ತಿಪಟ್ಟುಕೊಳ್ಳುವುದಾದರೆ ಅವರು ನಿರಾಶರಾಗಬೇಕಾದದ್ದಿಲ್ಲವೆಂದು ನಾನು ಭರವಸೆ ಹೇಳಬಲ್ಲೆ.

ಡಿ.ವಿ.ಜಿ.

## ಕೃತಜ್ಞತೆ

ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಈ ಪ್ರಹಸನಕ್ಕೆ ಮುನ್ನುಡಿಯನ್ನು ಬರೆದುಕೊಟ್ಟು ಉಪಕಾರಮಾಡಿರುವ ಶ್ರೀಮಾನ್ ಡಿ. ವಿ. ಗುಂಡಪ್ಪನವರಿಗೆ ನಾವು ಕೃತಜ್ಞರಾಗಿದ್ದೇವೆ. ಈ ಪುಸ್ತಕದ ಮುದ್ರಣದಲ್ಲಿ ನಾವು ಕೊಟ್ಟ ತೊಂದರೆ ಗಳನ್ನೆಲ್ಲ ಸಹಿಸಿ ಇದನ್ನು ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಜಿ. ಎಚ್. ರಾಮ ರಾಯರ ಉಪಕಾರವನ್ನು ನೆನೆಯುತ್ತೇವೆ.

ಗ್ರಂಥಕರ್ತ ಮತ್ತು ಪ್ರಕಾಶಕ

*

ಶ್ರೀ ಗೊರೂರು ರಾಮಸ್ವಾಮಯ್ಯಂಗಾರ್ಯರಿಗೆ

ಪ್ರಿಯಮಿತ್ರ,

ಈ ನಾಟಕದ ಮೊದಲನೆಯ ಅಂಕವನ್ನು ೧೯೪೨ರಲ್ಲಿ ನಾನು ಬರೆಯುತ್ತಿದ್ದಾಗ ನೀನು ಸೆರೆಮನೆಯಲ್ಲಿದ್ದೆ. "ಉರಿಯ ನಡುವೆ ಹೊಕ್ಕವರು ಸುಖಿಗಳು, ಹತ್ತಿರವಿರುವವರನ್ನು ಕಿಡಿಗಳು ಸೀಯುತ್ತವೆ" ಎಂಬ ಸುಭಾಷಿತದ ಸಾಕ್ಷಾತ್ಕಾರ ಆಗ ನನಗಾಯಿತು. ನಿನಗೆ ನಾನು ಮರುಗಲಿಲ್ಲ; ನನಗೆ ನಾನು ಮರುಗಿಕೊಂಡೆ. ಉದಾರಹೃದಯರಿಗೂ, ಧೀರರಿಗೂ, ಹುರುಪುಳ್ಳವರಿಗೂ ನೀನು ಹಿಡಿದ ಮಾರ್ಗ ಸಹಜ. ಹೊರಗಿನ ಪರಿಸ್ಥಿತಿ ಹದಗೆಟ್ಟು ರೂಕ್ಷವಾಗಿರುವಾಗ, ಯಾತನೆಯಿಂದ ವಿಷಮವಾಗಿ ಅಂತಃಪ್ರಕೃತಿ ಅಸ್ವಸ್ಥವಾಗಿರುವಾಗ ಬದುಕು ಭಾರವಾಗುತ್ತದೆ. ಇವೆರಡಕ್ಕೂ ಸಾಮರಸ್ಯವನ್ನು ಕಲ್ಪಿಸಿಕೊಳ್ಳದೆ ವಿಧಿಯಿಲ್ಲ. ನಿನ್ನಂತೆ ಸೆರೆಮನೆಯನ್ನು ಹೊಕ್ಕು ಆ ಭೂತವನ್ನೆದುರಿಸುವುದು ಒಂದು ದಾರಿ; ಇಲ್ಲ ತಕ್ಕ ರಕ್ಷಣೆಯನ್ನು ಕಲ್ಪಿಸಿಕೊಂಡು ಅದನ್ನು ನಿಟ್ಟಿಸಿ ಅದರ ಭಯವನ್ನು ನೀಗಿಕೊಳ್ಳುವುದು ಇನ್ನೊಂದು ದಾರಿ. ಅವರವರ ಎದೆಯ ಬಲವಿದ್ದಂತೆ ಅವರವರು ಇವೆರಡು ದಾರಿಗಳಲ್ಲಿ ಒಂದನ್ನು ಹಿಡಿದು ಬದುಕಬೇಕಾಗುತ್ತದೆ. ಆಗ ನನ್ನ ಜೀವ ಈ ನಾಟಕದ ಕೃತಕಾವರಣದಲ್ಲಿ ರಕ್ಷೆಗೊಂಡು ಅಂದಿನ ಇತಿಹಾಸದೊಳಹೊಕ್ಕು ಬಾಳಿತು. ಬಾಹ್ಯಪ್ರಕೃತಿಯ ನೈಷ್ಠುರ್ಯವನ್ನು ಆದಷ್ಟು ಕಡಿಮೆಮಾಡಿ ಅದನ್ನು ನನ್ನ ಒಳಗಿಗೆ ಹೊಂದಿಸಿಕೊಳ್ಳಬೇಕೆಂದು ಈ ನಾಟಕದ ದೊರೆಯನ್ನು ಸೃಷ್ಟಿಸಿದೆ. ನನ್ನ ಆತ್ಮ ತನ್ನ ಕ್ರಂದನವನ್ನು ಹತೋಟಿಗೆ ತಂದುಕೊಂಡು ಹೊರಗಿನ ಪರಿಸ್ಥಿತಿಗೆ ಅಭಿಮುಖವಾಗಿ ನಿಲ್ಲುವ ದಾರ್ಢ್ಯವನ್ನು ಪಡೆಯಲು ವಿಕಟಕವಿಯನ್ನು ರೂಪಿಸಿದೆ. ಧ್ಯೇಯದ ಉದ್ದೀಪ್ತಿಗಾಗಿ ಗಾಂಧೀಜಿಯಂತಹ ಜನನಾಯಕನೊಬ್ಬನನ್ನು ಈ ಕೃತಕ ಪ್ರಪಂಚಕ್ಕೆ ತಂದೆ. ಹೀಗೆ ಈ ಧ್ಯೇಯದ ಅವಕಾಶದಲ್ಲಿ ಈ ದೊರೆ ಮತ್ತು ಈ ವಿಕಟಕವಿಯ ನಡುವೆ, ಕಲಾಸ್ವಪ್ನದ ಮೆರುಗನ್ನು ಹೊಂದಿ, ಭಾರತದಲ್ಲಿ ನಡೆದ ಸ್ವಾತಂತ್ರ್ಯ ಸಮಾರಂಭದ ವಿಪ್ಲವ ಒಂದು ದೇಶೀಯ ಸಂಸ್ಥಾನದಲ್ಲಿ ಹೇಗೆ ತೆರೆಯಿಟ್ಟಿತು ಎಂಬ ಇತಿಹಾಸ ಈ

ನಾಟಕದಲ್ಲಿ ಹಾದುಹೋಗಿದೆ. ಇದು ಆ ದಿನಗಳ ಜೀವನದ ಪ್ರತಿಬಿಂಬವೂ ಅಲ್ಲ (ನಾನು ಕನ್ನಡಿಯಂಥ ನಿರ್ಜೀವ ವಸ್ತುವೇ?) ಬರಿಯ ಬಯಲು ಕನಸೂ ಅಲ್ಲ (ಎಚ್ಚೆತ್ತರೆ ಮರೆತುಹೋಗುವಷ್ಟು ಸಂವೇದನಾರಾಹಿತ್ಯವಿದೆಯೇ ಇಲ್ಲಿ?). ಬಾಹ್ಯಾಂತರ ಪ್ರಕೃತಿಗಳನ್ನು ಬದುಕಿಗೆ ಆದಷ್ಟು ಹೊಂದಿಸಿಕೊಂಡು ಬಾಳಬೇಕೆಂಬ ಜೀವಕಾಮಕ್ಕೆ ಒಳಪಟ್ಟು ಈ ಕೃತಿ ಮೂಡಿದೆ. ಆಗ ಈ ಕವಿಕರ್ಮ ನನ್ನನ್ನು ಭವದಿಂದ ಉತ್ತರಿಸಿತು. ಈ ತಾರಕಾಂಶವನ್ನು ನೆನೆದು ನಿನಗಿದನ್ನು ಮುಡಪಿಡಬಂದಿದೇನೆ.

ಮೇಲೆ ಹೇಳಿದ ರೀತಿಯಲ್ಲಿ ಈ ನಾಟಕದಲ್ಲಿ ನನಗೆ ಬಹು ಪ್ರಿಯವಾದ ಭಾಗ ನಿನ್ನ ಸ್ಮರಣೆಯಲ್ಲಿ, ಏಳು ವರ್ಷಗಳ ಹಿಂದೆ, ಬರೆದ ಮೊದಲನೆಯ ವಿನ್ಯಾಸಾಂಕ. ಆದರೆ ಇತಿಹಾಸಕ್ಕೆ ಮುಗಿವಿಲ್ಲ. ಹಿಡಿದೆನೆಂದಿರುವಾಗಲೇ ಜೀವನ ನಮ್ಮ ಹಿಡಿತದಿಂದ ನುಣಚಿಕೊಂಡು ಜಾರಿಹೋಗುತ್ತದೆ. ರಂಗದಲ್ಲಿ ಬೆಳಕಿನ ಬಿಂದುಗಳಂತೆ, ಈ ಜೀವ ಪ್ರವಾಹದ ಮೇಲೆ ಆಗಾಗ ಅಷ್ಟಷ್ಟು ಬಿದ್ದು ಅನಂತವಾದುದನ್ನು ಸಾಂತವಾಗಿ ಮಾಡಿಕೊಳ್ಳುತ್ತಾ, ಅಸಂಪೂರ್ಣವಾದುದನ್ನು ಸಂಪೂರ್ಣವೆಂಬ ಭ್ರಮೆಗೆ ಸಿಲುಕಿಸುತ್ತಾ, ಹಾರಾಡಿ ತಾರಾಡುವುದು ಕಲೆಗೆ ಬಂದ ಕರ್ಮ. ಈ ಕರ್ಮಕ್ಕೂ ಈ ನಾಟಕ ಸಿಕ್ಕಿಬಿದ್ದಿದೆ. ಸೆರೆಯಲ್ಲಿದ್ದವರು ಹೊರಕ್ಕೆ ಬಂದರು; ಹಿಂದೂ ಮುಸ್ಲಿಂ ಜಗಳದಲ್ಲಿ ದೇಶ ಸೊರಗಿತು. ಡಿಲ್ಲಿಗೆ ಸ್ವರಾಜ್ಯಬಂದರೂ ಇಲ್ಲಿಗೆ ಬರಲಿಲ್ಲ. ತಿರುಗಿ ನೀನು ಈ ಸಂಸ್ಥಾನದ ಬಿಡುಗಡೆಗಾಗಿ ೧೯೪೭ರಲ್ಲಿ ನಡೆದ ಚಳವಳಿಯಲ್ಲಿ ಸೆರೆಯಾಳಾದೆ. ಆದರೆ ಆ ಕತೆ ಈ ನಾಟಕದ ವಸ್ತುವಲ್ಲ. ಇದರ ಇತಿಹಾಸ ೧೯೪೭ನೇ ಆಗಸ್ಟು ಹದಿನೈದಕ್ಕೇ ಮುಗಿಯುತ್ತದೆ. ನನ್ನ ಈ ದೊರೆ ಮತ್ತು ಈ ವಿಕಟಕವಿ ಭಾರತಕ್ಕೆ ಸ್ವಾತಂತ್ರ್ಯ ಬಂದ ತರುಣದಲ್ಲಿಯೇ ತಮ್ಮ ಈ ನಾಡಿಗೂ ಸ್ವಾತಂತ್ರ್ಯವನ್ನು ತರುತ್ತಾರೆ. ಅವರ ಪ್ರಕೃತಿ ಅಂಥದು.

ಆಗಿನ ಕನಸೇನು? ಈಗಿನ ನನಸೇನು? ಇವುಗಳ ಅಂತರವನ್ನು ಅಳೆಯುತ್ತಾ ನಾವು ಕೊರಗುವುದು ಸ್ವಲ್ಪ ಕಾಲ ಅನಿವಾರ್ಯ. ಬದುಕು

ಹಸನಾಗಲೆಂದು ಸ್ವರಾಜ್ಯವನ್ನು ಬಯಸಿದೆವು. ಸ್ವರಾಜ್ಯಬಂದರೂ ಬದುಕು ಹಸನಾಗಲಿಲ್ಲ. ನಮ್ಮ ಧ್ಯೇಯಗಳ ಹಿಂಬದಿಯಲ್ಲಿ ದೈವದ ವಿಕಟಹಾಸವಿರುವಂತೆ ತೋರುತ್ತದೆ. ಇದನ್ನರಿತೇ ಗೀತೆಯು 'ಕರ್ಮ ನಮ್ಮದು, ಫಲ ದೈವೇಚ್ಛೆಗೆ ಸೇರಿದುದು' ಎಂದಿತೇನೊ. ಸ್ವರಾಜ್ಯ ಸಿದ್ಧಿಯಿಂದ ಕರ್ಮವಿರತಿಯನ್ನು ನಾಡು ಬಯಸಿದರೆ, ಸರ್ವಸಮೃದ್ಧಿಯ ಕಣಸು ನಮಗೆ ಕೈಗೂಡುವುದು ಹೇಗೆ? ಇದ್ದ ಅಲ್ಪ ಸ್ವಲ್ಪ ಸಿರಿಯ ಹಂಚಿಕೆ, ಈ ಹಂಚಿಕೆಯಲ್ಲಿ ಸ್ಪರ್ಧೆ, ಈ ಸ್ಪರ್ಧೆಯಿಂದ ಈರ್ಷ್ಯೆ. ಹೀಗೆ ಮತ್ತೊಂದು ವಿಷಚಕ್ರ ಪ್ರಾರಂಭವಾಗಿರುವ ಹಾಗೆ ಅನೇಕರಿಗೆ ತೋರೀತು. ಬ್ರಿಟಿಷರು ತೊಲಗಿದರು, ಅವರ ನಾತ ಇನ್ನೂ ತೊಲಗಿಲ್ಲ. ಅದನ್ನು ಕೊಚ್ಚಿಕೊಂಡು ಹೋಗುವ ಮತ್ತೊಂದು ತರದ ದೇಶಪ್ರೇಮದ ಬಿರುಗಾಳಿಗೆ ನಾವು ಸ್ವಲ್ಪ ಕಾಲ ಕಾಯಬೇಕು. ಪರರ ಆಳಿಕೆ ಇಲ್ಲಿ ಸಾಗುವಂತೆ ಆಗುಮಾಡಿದ ನಮ್ಮ ಪ್ರಕೃತಿ ಇನ್ನೂ ಬದಲಾಯಿಸಿಲ್ಲ. ಅದನ್ನು ಜಯಿಸಿ ಪಳಗಿಸಬಲ್ಲ ಆತ್ಮವಿದ್ಯೆಯನ್ನು ನಾವು ಪಡೆದ ಹೊರತು ಸ್ವರಾಜ್ಯದ ಸಂಪೂರ್ಣ ಸಿದ್ಧಿ ನಮಗೆ ದೊರೆಯದು. ಇದರ ಸಾಧನೆಗೆ ನಮಗೆ ಮತ್ತೊಂದು ತರದ ಹುಮ್ಮಸ್ಸು ಬೇಕು, ಧ್ಯೇಯ ಬೇಕು, ಶ್ರಮ ಬೇಕು. ಪ್ರಸೂತಿ ಸೂತಕದ ದಿನಗಳು ಶುಭದಿನಗಳಾದರೂ ಉತ್ಸವದ ದಿನಗಳಲ್ಲ. ನಮ್ಮ ನಾಡಿನ ಬಾಳ್ವಿಗೆ ಈ ನವ ಜನ್ಮದ ಆಶೌಚ ಮುಗಿದು ಅದು ಶುಚಿಯಾಗಲು ಹತ್ತು ವರ್ಷಗಳಾದರೂ ಬೇಡವೆ? ನಮ್ಮ ದೇಶವಾತ್ಸಲ್ಯವೇ ಈಗಿನ ನಮ್ಮ ಅಸಂತುಷ್ಟಿಗೂ ಕಾರಣವೆಂದು ನಾನು ಭಾವಿಸುತ್ತೇನೆ. ಈ ನಾಡಿನ ಮಕ್ಕಳಲ್ಲಿ ಅಸಹನೆ, ಅನೌದಾರ್ಯ, ಅಸೌದರ್ಯ ಇತ್ಯಾದಿ ದುರ್ಗುಣಗಳು ತಲೆಯೆತ್ತಿ ತೋರಿದರೆ ಸುಜನರು ಪರಿತಪಿಸುವುದು ಸಹಜ. ಸ್ವಜನವೆಂಬ ಪರಿಗಣನೆಯಿಂದಲ್ಲವೆ ಈ ದುಃಖ? ಶತ್ರುಗಳಲ್ಲಿ ಈ ದುರ್ಗುಣಗಳು ಕಾಣಬಂದರೆ ಅವು ನಮಗೆ ನೆಮ್ಮದಿಯನ್ನೇ ತಂದಾವು. ಅಸಮೃದ್ಧಿಯೇ ಈ ದುರ್ಗುಣಗಳ ಮೂಲ. ಯಾರಿಗೆ ತಾನೆ ಬಡತನದಲ್ಲಿ ಬಾಳಬೇಕೆಂಬಾಸೆ? ಎಂಥ ಆಳಿಕೆಯೇ ಆಗಲಿ ಎಲ್ಲರ ಬಡತನವನ್ನೂ ಪೂರೈಲಾರದು. ಬಡತನ ಪೌರುಷದ ನ್ಯೂನತೆಯನ್ನು ತೋರಿಸುತ್ತದೆ,

ಆಳಿಕೆ ಆತ್ಮಗೌರವದ ನ್ಯೂನತೆಯನ್ನು ಸೂಚಿಸುತ್ತದೆ. ಆದುದರಿಂದ ಸರ್ವಸಮೃದ್ಧಿ ಮತ್ತು ಅರಾಜಕತೆ ಇವೇ ಮಾನವ ಸಮಾಜದ ಗುರಿ. ಸಾಂಘಿಕವಾದ ಪುರುಷಪ್ರಯತ್ನವಿಲ್ಲದೆ ಸರ್ವಸಮೃದ್ಧಿಯಿಲ್ಲ, ಪರಸ್ಪರ ರಕ್ಷಕವೂ ಧರ್ಮನಿಷ್ಠವೂ ಆದ ಸ್ವಕರ್ಮರತಿ ಇಲ್ಲದೆ ಅರಾಜಕತೆಯ ಸಿದ್ಧಿಯೂ ಇಲ್ಲ. ಈ ಗುರಿಗಳನ್ನು ಮುಟ್ಟಿದ ಒಂದು ದೇಶದ ವರ್ಣನೆ ಮಹಾಭಾರತದಲ್ಲಿ ಒಬ್ಬ ರಾಜನನ್ನೇ ಕುರಿತು ಅವನ ಪೌರಾಣಿಕನು ಹೇಳಿದ ಈ ಶ್ಲೋಕದಲ್ಲಿದೆ: "ನ ತತ್ರ ರಾಜಾ, ರಾಜೇಂದ್ರ, ನ ದಂಡೋ ನ ಚ ದಂಡಿನಃ। ಸ್ವಧರ್ಮೇಣೈವ ಧರ್ಮಜ್ಞಾಸ್ತೇ ರಕ್ಷಂತಿ ಪರಸ್ಪರಂ ॥" ಇದು ಗಾಂಧೀಜಿಯವರ ಅಹಿಂಸೆಯ ತುಟ್ಟತುದಿಯ ಕನಸು. ನಮ್ಮ ನಾಡು ಅಂಥ ಜನಪದವಾಗುವುದಕ್ಕೆ ನಮ್ಮ ಈ ಸ್ವರಾಜ್ಯಸಾಧನೆ ಮೊದಲನೆಯ ಹೆಜ್ಜೆ. ಈಗ ನಮಗೆ ಸಂದಿರುವ ಸ್ವರಾಜ್ಯದ ವರವಾದರೂ ಸಾಮಾನ್ಯವಾದ ವರವೇ? ನಮ್ಮ ಜನ್ಮದಲ್ಲಿ ನಾವು ಇಂಥ ಶುಭವನ್ನು ಕಾಣುತ್ತೇವೆಂದು ಕನಸಿನಲ್ಲೂ ಎಣಿಸಿದ್ದೆವೆ? ಭಾರತೀಯರಲ್ಲದೆ ಮಿಕ್ಕವರಾರು ಭಾರತೀಯರಿಗೆ ಬಂಧುಗಳು? ಭಾರತವಲ್ಲದೆ ಮಿಕ್ಕಾವ ದೇಶ ನೆಲೆ?

"ರುಷಾನಿರಸ್ತೋಽಪಿ ಶಿಶುಃ ಸ್ತನಂಧಯೋ
ನ ಜಾತು ಮಾತುಶ್ಚರಣೌ ಜಿಹಾಸತಿ."

ನಮ್ಮ ಜನ ಸ್ವಾತಂತ್ರ್ಯಕ್ಕೆ ಹೋರಾಡಿದ ರೀತಿಯಲ್ಲಿ ಈ ಅನನ್ಯಶರಣತೆ ತೋರಿತಲ್ಲವೆ? ತನ್ನ ವಿಷಮ ದಿನಗಳಲ್ಲಿ ಈ ತಾಯಿ ತನ್ನ ಮಕ್ಕಳಿಗೆ ಮುನಿದಿದ್ದಾಗ ನಮ್ಮ ಅನೇಕ ದೇಶಬಂಧುಗಳಂತೆ ನೀನೂ ಆಕೆಯ ಕಾಲುಗಳನ್ನು ಬಿಡದೆ ಅಲ್ಲೇ ತೊಡರಿಕೊಂಡಿದ್ದೆ. ಅದನ್ನು ನೆನೆದುಕೊಂಡರೆ ನನ್ನ ಮನಸ್ಸು ಕರಗಿ ನಮ್ರವಾಗುತ್ತದೆ. ಈ ನಾಡಿನೊಲುಮೆ ಈ ನಾಡಿನವರೊಲುಮೆ ಇದು ನಿನ್ನ ತಾರಕಶಕ್ತಿ. ನಿನ್ನ ಸಹಜೌದಾರ್ಯದ ಮೂಲದಲ್ಲಿ, ಕಲೆಯ ನೆಲೆಯಲ್ಲಿ, ನೋಟದ ಹೊಳಹಿನಲ್ಲಿ, ಈ ಪ್ರೇಮದ ಸಲೆಯಿದೆ, ತೇಜವಿದೆ. ನನ್ನ ನಿನ್ನ ಸ್ನೇಹವೇ ಈ ಏಕಾನುರಕ್ತಿಯಲ್ಲಿ ರೂಢಮೂಲವಾಗಿರುವಂತೆ ತೋರುತ್ತದೆ.

ನೀನು ನನ್ನ ಬಾಳಿಗೆ ಬಾರದಿದ್ದರೆ ಈ ಬದುಕು ಇಷ್ಟು ಹಸನಾಗುತ್ತಿರಲಿಲ್ಲ. ಇಷ್ಟು ಸರಸವಾಗುತ್ತಿರಲಿಲ್ಲ. ಆದುದರಿಂದ ಈ ಕೃತಿಯ ಕಲಿಯು ಬೆಲೆ ಏನೇ ಇರಲಿ, ನೇಹಿಗ,

ಸನಿಯವಿರೆ ಸೊಗವಾಗೆ, ದೂರವಿರೆ ನೆನೆದೊಡನೆ ನನಸು ರುಚಿಯಾಗೆ
ದೇವರೆನ್ನಗಿತ್ತ ನಲ್ಮೆ ಬಳುವಳಿಯಂತೆ ನಿನ್ನ ಕೆಳೆಯಾಗೆ
ಈ ಕೆಳೆಯ ಕೇಂದ್ರದೊಳು ತಾಯ್ನುಡಿಯ ತಾಯ್ನಾಡಿನೊಲುಮೆ ಹೊಗರಿಡಲು
ಈ ದಿವ್ಯಭಾವಗಳನರ್ಚಿಸುವ ನಲವೆನಗೆ ನೀನೀಗನು ಕೊಳಲು.

ನರಸಿಂಹ

# ಸ್ಥಾನಗಳು

ವಿನ್ಯಾಸಾಂಕ } ಉದ್ಯಾನವನ
ಉಪನ್ಯಾಸಾಂಕ } ಅರಮನೆ

ಸಂನ್ಯಾಸಾಂಕ—ರೆಸಿಡೆಂಟನ ಮಂದಿರ ಮತ್ತು ಅಲ್ಲಿಗೆ ಹೋಗುವ ಹಾದಿ.

# ಪಾತ್ರಗಳು

ದೊರೆ

ಪ್ರಧಾನಿ (ಕೊನೆಯ ಅಂಕದಲ್ಲಿ ಈತನೇ ಆಪ್ತ ಸಚಿವ)

ಅಮಾತ್ಯರು, ಪ್ರಚಾರಣ ಮಂತ್ರಿ

ವಿಕಟಕವಿ

ಜನನಾಯಕ

ಮುಸ್ಲಿಂ ನಾಯಕ (ರಾಜಾಖಾನ್)

ಮುಸ್ಲಿಂ ಹಿರಿಯ (ತಾಜಾಖಾನ್)

ಮುಸ್ಲಿಂ ಉಪನಾಯಕ (ರಹಿಮಾನ್‌ಖಾನ್)

ಕಾಂಗ್ರೆಸ್ ನಾಯಕ

ರೆಸಿಡೆಂಟ್

ಆತನ ಪ್ರೈವೇಟ್ ಸೆಕ್ರೆಟರಿ

ಕವಿ, ಗಮಕಿ, ವಾದಿ, ವಾಗ್ಮಿ, ಕಾಂಗ್ರೆಸ್ ಯುವಕರು, ಮುಸ್ಲಿಂ ಯುವಕರು, ದಳಪತಿ, ಐ. ಜಿ. ಪಿ., ನ್ಯಾಯಾಧೀಶ, ರಾಜ್ಯನೀತಿವಿಶಾರದ, ದರ್ಬಾರ್ ಭಕ್ತ, ಎ.ಡಿ.ಸಿ., ಬಾಗಿಲಾಳು, ಮಾದಯ್ಯ, ಪಂಡಿತ, ಯುವಕ ಬಂಧು, ಕಾಂಗ್ರೆಸ್ ಸೋಷಿಯಲಿಸ್ಟ್, ಸೂತ್ರಧಾರ, ನಟಿ, ದಳದ ನಾಯಕ, ದಳದವರು, ಪೋಲೀಸಿನವರು.

# ವಿಕಟಕವಿ ವಿಜಯ

## ನಾಂದಿ

ಬಗೆಬಗೆ ರಸಭೂಮಿಕೆಯಿಂ
ಬಗೆಗೊಂಡಾನಂದಮೊಂದ ಮೂರ್ತಿಸ ಬಗೆಯೊಳ್
ಜಗದಿರವಳಿವಂ ಸತತಂ
ಬಗೆವಾ ವಿಶ್ವಾತ್ಮನಕ್ಕೆ ತುಷ್ಟಂ ಕೃತಿಯಿಂ ॥

## ವಿನ್ಯಾಸಾಂಕ

**೧೯೪೨**

**ಸೂತ್ರಧಾರ**

(ಸಭೆಯ ಕಡೆ ನೋಡಿ—ಕಾತರಗೊಂಡು)

ಸಂಜೆ ಇದೊ ರಂಜಿಸಿದೆ
ಸಭೆಯೊ ಸನ್ನಂಜಿಸಿದೆ
ಮನವ ರಂಜಿಸು ಎನ್ನುವಾಣತಿಯನಿತ್ತು

(ನೇಪಥ್ಯದ ಕಡೆಗೆ ತಿರುಗಿ)

ಓ ಪ್ರಿಯೇ ಚಾರಿತ್ರೆ
ಸಿಂಗರವ ಮುಗಿಸುತ್ತೆ
ತಿಲಕ ತಿದ್ದಿಡೆ ಸಮಯವಿಲ್ಲ ಈ ಹೊತ್ತು

**ನಟಿ**

(ತಿದ್ದಿದ ತಿಲಕವನ್ನು ಕೋಪದಿಂದ ಕೆದರುತ್ತಾ ರಂಗವನ್ನು ಪ್ರವೇಶಿಸುತ್ತಾಳೆ.)

ಸರಿಯಾಯ್ತಿಗೋ, ಇದುವೆ ಸರಿ
ನಾನೆ ನಿಮ್ಮ ಕಣ್ಣೆಸರಿ.

**ಸೂತ್ರಧಾರ**

ಓ ಸಹಚರಿ,
ಇತ್ತ ದರಿ ಅತ್ತ ಹುಲಿ,

ಕಾಳಿಯಂತೆ ನೀ ಕನಲಿ
ಇಂತ್ಯೆತರಲೇ ಗೈಯಲಿ.
ಈ ಸಭೆಗೇನೆನಲಿ.

ನಟ

(ಸಭೆಯನ್ನು ನೋಡಿ ನಗುತ್ತಾ)

ಓವ್ವೋವ್ವೋ ಸ್ವ ದಿಗಿಲು,
ನನ್ನ ವಸರಕಿದೆ ವಿಗಿಲು.
ಗಾಳಿ ಕಲಕುವ ತುಂಬುದಾವರೆಯ ಕೆರೆಯಂತೆ
ಬಿಡುವಿಲ್ಲದುಲಿದಾಡಿ ತಲೆಯನೊಲೆದು,
ಪ್ರಕ್ಷುಬ್ಧ ಚಿತ್ತದೊಳು ರಂಗದೆಡೆ ಕಣ್ಮಾಡಿ,
ನಟರೆದೆಗೆ ದಿಗಿಲಾಸೆ ಮುಂದಿಯಿಹುದು.

ಸೂತ್ರಧಾರ

ಚೆಲುವೆ ನೀ, ಕೊರಲು ಸವಿ, ಮಾತು ಮಕರಂದದೊಲು
ಮಧುರವಾಗಿದೆ, ಸಭೆಯೊ ಮೌನದಿಂದ
ನಿನ್ನನೇ ನಿಟ್ಟಿಸುತ ಕೌತುಕದಿ ಕುಳಿತಿಹುದು;
ಇವರ ಮನವೊಲಿಸು ನೀ ಗಾನದಿಂದ.

ನಟ

ಸ್ವಪ್ರಿಯಾ ಚದುರ ನೀ, ಹೊಗಳಿಕೆಯ ಬೆಲೆ ಬಲ್ಲೆ.
ಆದೊಡೆನಿಪುದು ಹಾಡೆ ಸಮಯವಲ್ಲ–
ಆಟಕ್ಕೆ ಇದೆ ವೇಳೆ, ಅಶುಭವನೆ ಪ್ರಾರ್ಥಿಸಿ
ಆವೇಗಗೊಂಡಿರಲು ನಾಡು, ನಲ್ಲ?

ಸೂತ್ರಧಾರ

ಎಲ್ಲ ಅನುಭಾವಕೂ ರಾಗವೊಂದುಂಟೈಸೆ
ಎಲ್ಲ ರಾಗಕು ಒಂದು ದೈವವುಂಟು;
ಜನಮನವನಿಂದಲೆವ ಉದ್ವೇಗವಧಿದೈವ
ಒಂದುಂಟು, ಅದು ಮೂಡೆ ಗೀತವುಂಟು.

ಸಮಯಜ್ಞೆ ನೀನು ಸಖಿ ಚತುರೆ ನೀನು
ಕಲೆಯ ನೆಲೆ ಬಲ್ಲವಳಿಗೇನೊರೆವೆ ನಾನು !

ನಟ

(ಹುಸಿನಕ್ಕು, ಆಲೋಚನೆಯನ್ನಭಿನಯಿಸಿ)

ನಲ್ಲೆ, ಮನಕಾಯ್ತು ಹಾಡೊಂದು ಕಾಳಿಯನು ಕುರಿತು
ಅದನೆ ಹಾಡುವೆನಿಂದು ಕಲೆಯ ಹದವಣನರಿತು.

(ಅಭಿನಯ ಪೂರ್ವಕವಾಗಿ ಹಾಡುವಳು.)

ರಾಗ--ಕಲ್ಯಾಣಿ

ವೈದೋರು ತಾಯೆ
ರುದ್ರಜಾಯೆ, ಓ ನಾಯೆ ॥
ಶಿವನ ಹಣೆಗಣ್ಣು ತೆರೆಯುತೆನುವೊಲು
ಪಡುವ ದೆಸೆಯೊಳಗೆ ಸೂರ್ಯನುರಿಯಲು
ಮೋಲೆ ಮುಗಿಲು ಆವೇಶಗೊಂಡ ತೆರ
ಬಣ್ಣನೇರುವೀ ಜಗಿನ ಸಮಯದಿ
ಎಲ್ಲ ದೆಸೆಯಿಂದ ಹಕ್ಕಿ ಹಾರಿಬರೆ
ಹರಣಗೊಂಡಂತೆ ತರುಗಳಾರುತಿರೆ
ಹಾಡು ಲಾವಣಿಯ ದನಿಗೆ ಕಾವೇರಿ
ಜಯಜಯೆಂದು ಈ ಜನತೆ ಮೊರೆಯುತಿರೆ
ನಾಡಿನೆದೆಯುರಿಯೆ ನ್ಯಾಯ ಕೊಂಡಿತೋ
ಸಾವಿನಂಜಿಕೆಯ ಭೂರಿಯುಂಡಿತೋ
ಬಾಳ ಜೊಳ್ಳುರಿದು ಜ್ವಾಲೆ ಹೊಮ್ಮಿತೋ
ಜ್ಯೋತಿಯಾವುದೆನೆ ಸೋಜಿಗದಿಂದಲಿ
ಹವಿಯನುಂಡು ಹೋಮಾಗ್ನಿ ಕಾಂತಿಯಿಂ
ಒಡೆಯ ಬಯಸುತಿಹ ಶುಭವ ತೋರುವೊಲು
ನಾಡು ಬೇಳುವೀ ನಮ್ಮ ಬಾಳುವೆಯ
ಕೊಂಡು ಕಳೆಗೊಂಡು ಶುಭವನೆ ತೋರುತ

ಸರ್ವಶಕ್ತೆ ಓ ಸರ್ವಭಯಂಕರಿ
ಸರ್ವಭದ್ರೆ ಓ ಸರ್ವಶುಭಾಕರಿ
ಕಾಳಿ ಬಾರವ್ವ ದೃಪ್ತರ ಹೃದಯಕೆ
ದುರ್ಮದಾಹಿ ವಿಷ ಕಾರಲು ಕುಣಿಯುತ

ತೆರೆಯಲ್ಲಿ

[ ಲೇಸ ನುಡಿವೆ, ಸಖಿ, ಲೇಸನೆ ನುಡಿವೆ.
ಕಾಳಿ ಬಾರವ್ವ ದೃಪ್ತರ ಹೃದಯಕೆ
ದುರ್ಮದಾಹಿ ವಿಷ ಕಾರಲು ಕುಣಿಯುತ ]

ಸೂತ್ರಧಾರ

ಸೊಗಸು, ಸಖಿ, ಸೊಗಸಾಯ್ತು,
ರಂಗಮಂಗಳವಾಯ್ತು.
ನನಸೆ ಕನಸಾಯ್ತು.
ಜಗದ ರಂಗದ ಬಿಂಬವೀ ರಂಗದೊಳಗಾಯ್ತು.
ನಡೆ, ಕೇಳದಿ, ಆಟ ಮೊದಲಾಯ್ತು.

(ಸೂತ್ರಧಾರ ಹೊರಡುತ್ತಾನೆ. ನಟಿ ಸಭೆಯ ಕಡೆಗೆ ನೋಡಿ ಕೊಂಕಿನ ನಗೆ ನಕ್ಕು ಮರೆಯಾಗುತ್ತಾಳೆ.)

## ದೃಶ್ಯ ೧

### ಉದ್ಯಾನದಲ್ಲಿ

(ಬಾವುಟ ಹಿಡಿದು ಗುಂಪೊಂದು ಬರುತ್ತದೆ. ಗುಂಪಿನ ನಾಯಕನು ಹುಮ್ಮಸ್ಸಿನಿಂದ ಹಾಡುತ್ತಾನೆ. ಮಿಕ್ಕವರು ಸಮಯಬಿದ್ದಂತೆ ದನಿಗೂಡಿಸುತ್ತಾರೆ.)

ಕಾಳಿ ಬಾರವ್ವ ದುಷ್ಟರ ಹೃದಯಕೆ
ಮರ್ಮದಾಹಿ ವಿಷ ಕಾರಲು ಕುಣಿಯುತ—
ಸರ್ವಶಕ್ತೆ ಓ ಸರ್ವಭಯಂಕರೆ
ಸರ್ವಭದ್ರೆ ಓ ಸರ್ವಶುಭಾಕರೆ
ನಾಡು ಬೇಳುವೀ ನಮ್ಮ ಬಾಳುವೆಯ
ಹುಸಿಯ ಕೊಂಡು ಕಳೆಗೊಂಡು ಹರಸುತ—

(ಹಾಡುತ್ತಾ, ಬಾವುಟ ಹಿಡಿದು ಧಿಣ್ಣೆಯೇರಿ ನಿಂತು ಜನನಾಯಕ ನೆರೆದವರನ್ನು ಈ ರೀತಿ ಸಂಬೋಧಿಸುತ್ತಾನೆ.)

ಜನನಾಯಕ

ಬಂಧುಗಳೇ ಲಾಲಿಸಿರಿ.
ಮನದಿ ಮಾತನೂರಿಸಿರಿ.
ಜಯವೆಂಬೆವು ಸೋತ ಜನ
ಅದ ಬಯಸಿದೆ ಇಂದು ಮನ.
ಜಯಜಯ ಎಂದೊಡೆ ಗೆಲವು
ಜಯ ಎಂದೊಡನೇ ನಲವು.
ಎಂತಿದ ಪಡೆಯುವ ರೀತಿ ?
ಅಳಿಯಲು ಮನದೊಳು ಭೀತಿ—
ಭೀತಿಯಿಲ್ಲದಿಹುದೆ ಜಯ
ಅಂಜುವುದೇ ಸೋಲ್ ನಿಶ್ಚಯ.
ಇದನರಿಯುತ ಬಂಧುಗಳೇ
ಜಯವೆನ್ನಿರಿ ಬಿಡುಗಡೆಗೆ.

ಎಲ್ಲರೂ

ಜಯ ಜಯ ಜಯ ಬಿಡುಗಡೆಗೆ
ಜಯ ಜಯ ನಮ್ಮೊಡೆಯರಿಗೆ.

ಜನನಾಯಕ

ತೋಳಗುಂಟು ಹಸಿವ ಮಿತಿ
ಕುರುಬನಾಸೆಗುಂಟೆ ಮಿತಿ ?
ತೋಳಗಂಜಿ ಕುರುಬನಿಗೆ
ಶರಣೆನ್ನುವ ಬಡಕುರಿಗೆ
ಹಮಳವೆ ಹೇಳಿರಿ ಜನರೇ
ಇಂತೆಯೆ ನಮ್ಮಿರವವರೇ.
ಹೆರರ ನಂಬಿ ಬದುಕುವರೇ ?
ಇದನರಿಯುತ ಬಂಧುಗಳೇ
ಬಯಕೆಗೊಳ್ಳಿ ಬಿಡುಗಡೆಗೆ.

ಎಲ್ಲರೂ

ನಮಗಿಹುದೊಂದೇ ಮಂತ್ರ—
ನಾಯಕರೇ, ಸ್ವಾತಂತ್ರ್ಯ.

ಜನನಾಯಕ

ಕಟ್ಟಿಯಿಂದ ಕಾಲುವೆಗೆ
ಹರಿವ ಹೊನಲು ಹೊಳೆಯುಹುದೇ ?
ಹೆರರಿಚ್ಛೆಗೆ ನಡೆವ ಬಾಳು
ಲೋಕದೊಳಗೆ ಬೆಲೆಯುಹುದೇ ?
ತನ್ನ ಹಾದಿ ತಾ ನಡೆದೇ
ಪುಣ್ಯಳೆನಿಸುವಂತೆ ಹೊಳೆ,
ತನ್ನಿಚ್ಛೆಗೆ ತಾ ನಡೆದೇ
ಜನದ ಬಾಳ್ವಿಗಹುದು ಬೆಲೆ—
ಇದನರಿಯುತ ಬಂಧುಗಳೇ
ಬಯಕೆಗೊಳ್ಳಿ ಬಿಡುಗಡೆಗೆ.

ಹಾಯ್ ಹಾಯ್,
ಹೆರರಾಳುವ ಜಡರಾವು
ನಮ್ಮೆಲ್ಲಂಗಕು ನೋವು
ನಮ್ಮ ದೇಹಕೊಗ್ಗದಿಹ
ಅನ್ನವೆ ವಿಷವಪ್ಪುದಹ
ನಮ್ಮನಾಡಿಗೊಗ್ಗದಿಹ
ಜನವೇ ಹಗೆಯಪ್ಪುದಹ!
ಈ ಸೇರುವೆಯೊಳೆ ತಪ್ಪು
ಬೇರೆಯಾಗೆ ಅದೆ ಒಪ್ಪು.
ಇದನರಿಯುತ ಬಂಧುಗಳೇ
ಬಯಕೆಗೊಳ್ಳಿ ಬಿಡುಗಡೆಗೆ.

ಬಿಡಿರೆಲ್ಲಾ ಚಪಲಗಳ
ಮುಂದೊದಗಲು ನಮಗೆ ಬಲ.
ಜಡಕುಪವಾಸವೆ ಮದ್ದು
ಸಲ್ಲದು ನಾಲಿಗೆ ಮುದ್ದು---
ಅದರಿಂ ಬಿಡಿ ಬಯಕೆಗಳ
ಅದ ಸಲ್ಲಿಸ ಹರಕೆಗಳ
ಸಿಕ್ಕಿಸೆಲ್ಲ ಪ್ರೋಷಣೆಯು
ಹುಸಿಯಾಸೆಯ ಶೋಷಣೆಯು
ತುಸ ಒಣಗಲಿ ಈ ದೇಹ
ಹೊಮ್ಮಲಿ ಆತ್ಮದ ದಾಹ.
ಈ ವ್ಯಾಧಿಗೆ ಏನಮೃತ?
ಬಿಡುಗಡೆ ಜೇರಿಕ್ಕೆನುತ
ಮಹಾತ್ಮರ ಆಣತಿಯು
ಒಗೆದು ಬಯಸಿ ಬಿಡುಗಡೆಯ.

ಸ್ವಾತಂತ್ರ್ಯವೆ ನಮ್ಮ ಛಲ
ಈ ದೃಢವೆಂದಿಗು ಅಚಲ

ಇಂದೇ ಒದಗಲಿ ಮರಣ
ಇದಕೇ ಮೀಸಲು ಹರಣ
ಮಹಾಕಾಳಿ ನಮಗೆ ಬಲ
ಜಯವೆನ್ನಿರಿ ನೂರುಸಲ.

("ನಾಡಿನವೆಯುರಿಯೆ" ಎಂದು ಹಾಡುತ್ತಾ ಗುಂಪು ಮರೆಯಾಗುತ್ತದೆ. ಪುರಜನರ ವೇಷದಲ್ಲಿರುವ ಕವಿ ಮತ್ತು ವಿಕಟಕವಿ ಇವರಿಬ್ಬರನ್ನು ಪ್ರತ್ಯೇಕಿಸಿ ತೆರೆ ಬೀಳುತ್ತದೆ.)

ವಿಕಟಕವಿ

ಎದೆ ಝಲ್ಲೆಂದಿತು ಗುಂಪನು ನೋಡಿ
ಕಾಳಿ ಬಂದಳೋ ಎನೆ ಮೈಗೂಡಿ.

ಕವಿ

ಪತಂಗ ದೀಪಕೆ ಧಾವಿಸುವಂತೆ
ಒಡೆಯರ ಕೋಪಕೆ ಈ ಜನಸಂತೆ
ಬೀಳುವೆಯಾಗಲು ಹುರಿಗೊಂಡಿಹುದೊ
ಈ ಆತ್ಮಾಹುತಿಯಿಂದೇನಹುದೋ.

ವಿಕಟಕವಿ

ಆ ಗುಂಪೊಡೆಯನ ಮಾತನಾಲಿಸಲು
ಮೊದಲಾಯ್ತೆನ್ನೆದೆ ವೇಗದಿ ಚಲಿಸಲು.

ಕವಿ

ಮಾತು ಹೊಸವಲ್ಲ—ಇಂಥದ ನಾನು
ನನ್ನೇಕಾಂತದಿ ನೂರ ಬಲ್ಲೆನು.

ವಿಕಟಕವಿ

ದಿಟ, ಹೂಹಗುರದ ಮಾತಿನ ಜಾಣ
ನಿನ್ನ ಮಾತಿಗೇಕಾಂತವೆ ತಾಣ.
ಇವನದೊ ಬಯಲಿನ ತಮಟೆಯ ಸದ್ದು
ಮೊದ್ದು ಜನದ ಕಿವುಡೆದೆಗಿದೆ ಮದ್ದು.

ಕವಿ

ಸೈ ಕೋಡಂಗಿ—ನೀನೊರೆದುದು ಸೈ
ಮೊದ್ದು ಜನಕೆ ಬರಿಸದ್ದೇ ಸೈ ಸೈ
ಮಾತನಾಲಿಸಿತು ಜನ ಎನ್ನುವೆಯಾ
ಆಲಿಸಿಯೂ ಅರಿಯಿತು ಎನ್ನುವೆಯಾ ?
ಮುಂದಿಗೆ ಬೇಕಾದುದು ಈ ಕೂಟ
ಹಲವು ತೆರದ ಜನ ನೆರೆಯುವ ನೋಟ
ಜನನಾಯಕರೆಂಬರ ಕೂಗಾಟ
ಮತ್ತೀ ಪೋಲೀಸರ ಕಾಟ
ಈ ಬಯಲಾಟವು ಯಾರಿಗೆ ಬೇಡ
ಖರ್ಚಾಗದೆ ಬಿಡಿಕಾಸೂ ಕೂಡ
ನವರಸಗಳು ಮಡುವಾಗುವುವಿಲ್ಲಿ
ಆದೊಡೆ ಬೀಭತ್ಸವೆ ಕೊನೆಗಿಲ್ಲಿ.
ಹೇಸುವೆ ನಾನೀ ಜನಜಂಗುಳಿಗೆ
ಸಿನಗಾಗಿಯೆ ಬಂದೆನು ಅರೆಗಳಿಗೆ.
ಆಹಹಾ, ಸಭೆಯೋ ಏನು ಹೇಳಲಿ
ಪಡ್ಡೆಯ ಹುಡುಗರು ಬಡ ದಿನಗೂಲಿ
ಗೈಮೆ ಇಲ್ಲದಿಹ ತರಲೆಗಳಿಲ್ಲಿ
ಕೋಳಿಯ ಮುಂಗಡೆ ಹರಳನು ಚೆಲ್ಲಿ
ರತ್ನಪರೀಕ್ಷೆಯ ಗೈಯುವನಂತೆ
ಆ ನಾಯಕನಾದನು ಇಂತೆ

(ಹಿಂದೆ ಸೈನ್ಯದ ದಳವೊಂದರ ಸೂಚನೆ ಕಾಣುವುದು.)

ವಿಕಟಕವಿ

ಇಂತೆಯೆ ನೀನರಿತುದು ಬಲ್ಲವನೇ,
ತುಸ ಕೇಳೀ ಪೆಚ್ಚನ ಸೊಲ್ಲನ್ನೇ :
ಕಿಡಿ ಉರಿವುದು ಪುರುಳಿಗೆ ಮೊದಲಂಟಿ
ಬಳಿಕದನಾದರಿಪುದು ಗಿಡಗಂಟಿ

ಆ ಮೋಗಡೆ ಹೆಮ್ಮರ ಹೆಬ್ಬನಕೆ
ಹಬ್ಬುವುದದು—ಇಂತೆಯೆ ಜನಮನಕೆ
ಮಹಾತ್ಮನೆದೆಯಿಂ ಸಿಡಿದೀ ಸೊಲ್ಲು
ಮೊದಮೊದಲೆನಿಸಿಪುದು ಬರಿಗುಲ್ಲು
ಹುಸಿಮನಕದು ಬರಿ ಕಸಿವಿಸಿ
ನಿನ್ನೊಲು ಬಲ್ಲವರಿಗೆ ಹುಸಿ
ನನ್ನೊಲು ಹೆಡ್ಡರಿಗೋ ಬಹಳ ಬಿಸಿ
ಈ ಸೆಕೆ ಎಲ್ಲರನೂ ತಾಗಿದೆ ಗೆಳೆಯ
ಬಾವುಟ ಹಿಡಿದೂಳುವ ನನ್ನೆಳೆಯ :
ಜಯ ಭಾರತಮಾತೆಗೆ
ಜಯ ಮಹಾತ್ಮ ಗಾಂಧಿಗೆ !!

(ಸೈನಿಕರಲ್ಲೊಬ್ಬ ಮುಂದೆ ಬಂದು)

ಸೈನಿಕ

ಜಯ ಜಯ ಅಂತೀಯ ರಸ್ತೆವೊಳ್ಗೆ
ಹಿಡಿದ್ ಹಾಕಿರ್ಲ ಇವನ ಲಾಕೋಪ್ ನೊಳ್ಗೆ.

(ಸೈನಿಕರು ಇವರಿಬ್ಬರನ್ನೂ ಸುತ್ತಿಕೊಳ್ಳುವರು.)

ಕವಿ

ಹಿಡಿಯುವೆ ನೀ ಯಾರನ್ನೋ
ನಾ ದೊರೆಗಳ ಕಡೆಯವನೋ.

ಸೈನಿಕ

ಅಬ್ಬಯ್ಯಾ
ಎಲ್ಲಿ ಬರೆಕೊಂಡಿದೀಯೋ ವಿಕಾಸಾನ
ತೋರ್ ಸೋ ರಾಜರ ಶಾಸನಾನ:

ವಿಕಟಕವಿ

(ಕರೆನ್ಸಿ ನೋಟನ್ನು ಜೇಬಿನಿಂದ ತೆಗೆದುತೋರಿಸಿ)

ಇದೋ ರಾಜರ ಪರವಾನಗಿ
ಜೇಬಲಿಕ್ಕಿ ಕೈಯ ತೆಗಿ.

ಸೈನಿಕ

ಹ್ಞ—ಕೊಡೋಕ್ ಬರತೀಯ ಲಂಚ
ನೋಡಿಲ್ಲ ಈ ಅಯ್ಯನ ಸಂಚ.

ಏಕಟಕವಿ

ಸಂಚೇನಿದೆಯೋ
ಹೊಂಚೇನಿದೆಯೋ
ಇಗೋ ಇಗೋ ಸರ್ಕಾರದ ಬರವಣಿಗೆ
ನೋಡಯ್ಯಾ ಕಣ್ಣಿಲ್ಲವೆ ನಿನಗೆ
ಇದಿಗೋ ಸಮ್ರಾಟರ ತಸ್ಬೀರು
ಇದರ ಮುಂದೆಯೋ ನಿನ್ ಕಾರ್‌ಬಾರು.

ಸೈನಿಕ

ಹ್ಞ, ಹ್ಞ, ಬಿಟ ಕಣಪ್ಪಾ-ಆಮೇಗೆ—

ಏಕಟಕವಿ

ರಾಯರ ಕೃಪೆಯೋ ಮಡುವಾಗಿದೆ ನನ್ನೊಳು
ಅವರಿತ್ತೀ ಮಂತ್ರದ ಕಂತೆಯೆ ಕಾಯುತ್ತಿದೆ ಬೆನ್ನೊಳು.
ಇದರ ಬೆಂಬಲದಿ ರೈಲೊಳು ಬಂದೆ
ಯಾರೂ ನನ್ನನು ತಡೆಯಲೆ ಇಲ್ಲ.
ಅಂಗಡಿಯಿಂದೀ ಉಂಗುರ ತಂದೆ
ಲಿಟ್ಟಯ ಯಾರಿಗು ದೂರಲೆ ಇಲ್ಲ.
ಗೌರವದೊಳು ದಯಮಾಡಿಸಿ ಎಂದು
ಕೈಮುಗಿದರು ಕಂಡವರೆನಗಿಂದು
ಅಹ್ಹಹ್ಹ-ಎಲ್ಲರನೂ ಬಿಡಿಸುವುದಿದು ಮಮತೆಯ-
ಸೆರೆಯಿಂದ
ಎಲ್ಲರಹಂತೆಯನೂ ತಗ್ಗಿಸಬಹುದಿದರಿಂದ
ಜನವನು ಪಳಗಿಸೆ ಜಗವನು ತೆರೆಯಿಸೆ
ಎದೆಯನು ಹಿಗ್ಗಿಸೆ ಮದವನು ತಗ್ಗಿಸೆ
ಎಲ್ಲದಕೂ ಈ ಮಂತ್ರವೆ ಸೈ ಸೈ.

ಇದೆ ಪಾಶಾಂಕುಶ, ಇದೆ ಬೀಗದಕ್ಕೈ
ಎಲ್ಲರನೂ ದೊರೆಯಿಚ್ಛೆಗೆ ನಿಲಿಸೆ
ಎಲ್ಲರ ಭೋಗವು ರಾಜರದೆನಿಸೆ
ಇದೆ ಮಂತ್ರ
ಈ ಚಾಣಕ್ಯನ ತಂತ್ರ.
ಕೋ ಕೋ ಇನ್ನೇತಕೆ ಅನುಮಾನ
ಇದೆ ಆಳ್ವರ ಅಭಿಮಾನದ ಮಾನ.
ಹೂಂ.

ಸೈನಿಕ

(ಗೆಳೆಯರನ್ನು ನೋಡಿ ತಿರಸ್ಕಾರವನ್ನು ತೋರಿ)

ಸಾಕ್, ಸಾಕ್ ನೀನೊಬ್ನೆ ಬುದ್ಧಿವಂತ
ತಿಳಕೊಂಡೆ ಏನೂ ಅಂತ
ಚಮಾರ್ಲಿ ಗಿಡಕೆ ಕಾಲ್ಗಾಕಾಲ್ಕೆ
ಕುಂಡದಾಗಿಟ್ಟು ನೀರ್ಹ್ಹೊಯ್ದಂಗೆ
ತಿಂಗಳ್ಗ್ ತಿಂಗಳ್ಗ್ ಹರಿಸ್ತಾರೆ
ನಂಕುಟುಂಬಕ್ ದೊರೆ ಸಿರಿಗಂಗೆ
ಹೊಸನೀರ್ ಬಂದು ಹಳೆನೀರ್ನ್ನ
ಕೊಚ್ಕೊಂಡ್ ಹೊರಟೇ ಹೋಗುವಂಗೆ
ನಂಪಾಡಾಗ್ತದೆ ಇದನೀಸ್ಕೊಂಡ್ರೆ.
ಹೋಗ್ಹೋಗ್ ನೀನಾವೂರ್ ಸಂತೆ.

ವಿಕಟಕವಿ

ಹೋಗುತೇನೆ ಬಿಡು ಬಿಡು ಸಿಪಾಯಿ
ನೀನಾಗುವೆ ಬೇಗನೆ ದಳವಾಯಿ.

ಸೈನಿಕ

ಸಾಕ್ ಸಾಕ್ ಹಾರುವ ನೀರ್ ಹರಕೆ
ನಾಯಕ ಬರಬೇಕ್ ನೀರ್ ಬಿಡೋಕೆ.

ವಿಕಟಕವಿ

ಹಾಗಾದರೆ ಬಾಪ್ಪಾ ಕೂರೋಣ
ಇವರನು ದೊರೆಗೇ ಮಾರೋಣ.

ಸೈನಿಕ

ಇವನೊಬ್ನೇ ಕಣೋ ದೊರೆಗಳ್ ಕಂಡೋನು.

ವಿಕಟಕವಿ

ಏನೆಂದುಕೊಂಡೆ ನಮ್ಮನ್ನು ನೀನು
ಪದ ಬೇಕಾದರೆ ಇವನು
ನಗೆ ಬೇಕಾದರೆ ನಾನು
ನಮ್ಮನ್ನು ಬಿಟ್ಟರೆ ದೊರೆಗಿನ್ನಿಲ್ಲ
ಇವ ದೇವರೆ ಬಲ್ಲ.

ಸೈನಿಕ

ಹಂಗಾ, ನೀನ್ ಬಲು ದೊಡ್ಡ ಮನುಸ ಕಣಪ್ಪಾ,
ದೊರೆಗೇ ಪದ ಹೇಳೋನು ನಮಗೂ ಒಂದ್ ಹೇಳಪ್ಪಾ.

ವಿಕಟಕವಿ

ನಿಮಗೂ ಹಾಡಿದೆ ಒಂದು.
ಕೋಣೆಯ ಕವಿ ಇವ; ಹಾಡಲು ಬಾರದು :
ನಾ ಹಾಡುವೆನಿಂದು.

(ಸಾಭಿನಯವಾಗಿ ಹಾಡುವನು.)

ಲೆಫ್ಟ್ ರೈಟ್, ಲೆಫ್ಟ್ ರೈಟ್ ಎನು ಗೆಣೆಯಾ
ಕಾಳಗಕ್ಕೆ ಮನಮಾಡಿ ಮರೆ ಮನೆಯಾ
ರಮು ರಮು ರಮು ಝಣ ರಮುಘೋಲು
ಕೈಬೀಸ್ತಾ ಪದಹೇಳ್ತಾ ಇಡು ಕಾಲು
ಲೋಕ್‌ದೊಳಗೆ ಏನ್ಕೈತೋ ಇದಕು ಮೇಲು
ದೊರೆ ಇಚ್ಛೆ ಶಿವನಿಚ್ಛೆ ಎನುತ ಬಾಳು—

ಸೈನಿಕರು

ಹ್ಹ ಹ್ಹ ಹ್ಹ ಭಲೆ ಭಲೆ ಭೇಷಾಗೈತೆ

ಲೆಫ್ಟ್ ರೈಟ್, ಲೆಫ್ಟ್ ರೈಟ್ ಎನ್ನು ಗೆಣೆಯಾ
ಕಾಳಗಕ್ಕೆ ಮನಮಾಡಿ ಮರೆ ಮನೆಯಾ—

ವಿಕಟಕವಿ

ಮನೆಯೊಳಗೆ ಏನ್ಕೈತೋ ಬರಿ ಗೋಳು
ಉಣ್ಣೋದಕ್ಕೆ ಇಲ್ಲವಲ್ಲೋ ಹಿಡಿಕೂಳು
ಕುಯ್ಯೋ ಮೊರೆಯೋ ಅಳುತಾರೆ ಮಡದಿ ಮಕ್ಕಳು
ನೋಡಿ ಅಯ್ಯೋ ಅಂತಾರೆ ನೆರೆಯೊಕ್ಕಲು—
ಲೆಫ್ಟ್ ರೈಟ್....

ಇಕ್ಕೋ ಇಕ್ಕೊ ಎಂಗೈತೆ ಈ ಡ್ರಿಸ್ಸು
ಇಕ್ಕಿದರೇನೇ ಉಕ್ಕೈತೆ ಹುಮ್ಮಸ್ಸು
ಕಂಡ ಜನಕಾಗ್ತೈತೆ ಎದೆ ಅಳುಕು–ತಮ್ಮ
ನಮ್ಮೂರ್ನಾಗೆ ಯಾರ್ಗೈತೆ ಈ ತಳಕು.
ಲೆಫ್ಟ್ ರೈಟ್....

ನೇಗಿಲ ಮೊನೆಯಾಗೇನೈತೊ ಬರಿಮಣ್ಣು
ಭರ್ಜಿಕೊನೆಯಾಗ್ ಹೊರವಾಗೈತೆ ಹೊನ್ನಿನ್ ಹಣ್ಣು
ಹಿಂಗೆ ಹಿಂಗೆ ಕುಲುಕುಸ್ತಿದ್ರೆ ಗಳಿಗ್ಗೊಂದ್ಸಲ–ತಮ್ಮ
ಮಂತ್ರಿಸ್‌ದ್ಹಾಂಗೆ ಹರೀತೈತೆ ಅರ್ಪ್ಣ ಸಾಲ.
ಲೆಫ್ಟ್ ರೈಟ್....

ಬೈಗು ಬೆಳಗು ಕವಾಯಿತ್ತು ಎಡ ಬಲ
ದಳವಾಯಿ ಅಂತಾನೆ ಭಲ ಭಲ
ಕೈಕಾಲ್ಗೋಳ ಬೀಸಾಡ್ತಾನೆ ನಮಗೆ ಸಂಬಳ
ಎಲ್ಲಾರಂಜೋ ಸರ್ಕಾರಾನೇ ನಮಗೆ ಬೆಂಬಲ.
ಲೆಫ್ಟ್ ರೈಟ್....

ಹೊತ್ತಿಗೆ ಹೊತ್ತಿಗ್ ಅನ್ನವುಂಡು ಕಸರತ್ ಮಾಡಿ
ಕಂಡಾಗ್‌ಲೆಲ್ಲಾ ನಾಯಕರಿಗೊಂದು ಸಲಾಂ ಹೊಡಿ
ಎದುರ್ಗಾಡ್ದೆ ಬದಲ್‌ಮಾಡ್ದೆ ಹೇಳಿದ್ ಕೇಳು
ಇಲ್‌ದಿದ್ರೆ ಆಗ್‌ತೈತೆ ನಿನಗ್ ಜೈಲು.
ಲೆಫ್ಟ್ ರೈಟ್....

ಹೊಡಿ ಎಂದರೆ ಹೊಡೆಯಬೇಕು ನಿಮ್ಮ ನಾಯಕ
ಹಿಡಿ ಎಂದರೆ ಹಿಡಿಯಬೇಕು ನಿಮ್ಮ ನಾಯಕ
ಆಡರ್ ಮಾಡೋಗ್ ನೋಡಬೇಕು ಅರ್ವ ಸೆಡುಕ
ಉಹು ಎಂದ್ರೆ ತಾಳ್ ಜೈದ ಅರ್ವ ಸಿಡುಕ.

ಲೆಫ್ಟ್ ರೈಟ್....

ರಮು ಝುಣ ರಮು ಝುಣ ರಮುಘೋಲು
ಕೈಬೀಸ್ತಾ ಪದ ಹೇಳ್ತಾ ಇಡು ಕಾಲು
ಲೋಕ್‌ದೊಳ್ಗೆ ಏನೈತೋ ಇದಕು ಮೇಲು
ದೊರೆ ಇಚ್ಛೆ ಶಿವನಿಚ್ಛೆ ಎನುತ ಬಾಳು.

ಲೆಫ್ಟ್ ರೈಟ್....

ಸೈನಿಕ

ನಾಯಕ್ ಬರುತಾನ್ ಕಣ್ರೊ

ನಾಯಕ

(ಬಂದು)

ಏನಿದು ಗದ್ದಲ—ಯಾರಿವರು ?

ಪಿಕಟಕನಿ

ಇವನಿವ ನಾನ್ ನಾನ್ ನಾಯಕರೇ

ನಾಯಕ

(ನಗುತ್ತಾ)

ಸೀಪ್ ಸೀಪೇ ಆಗಿರಿ ಅಣ್ಣದಿರೇ—

(ದಳಕ್ಕೆ)

ಏತಕೆ ಹಿಡಿದಿರಿ? ಬಿಡಿ ಇವರ
ಹಿಂಸಿಸಬಾರದು ಜನಗಳನೆಂದು
ಅಪ್ಪಣೆಯಾಗಿದೆ ಹುಜೂರವರ.
ಕಾಲಿಡಿ ಮುಂದೆ
ನಡೆಯಿರಿ ಗುಂಪಿನ ಹಿಂದೆ.

ಲೆಫ್ಟ್ ರೈಟ್....

(ಹೋಗುವರು.)

ಕವಿ

ಬಿಟ್ಟರಲ್ಲಪ್ಪಾ ಸದ್ಯಕ್ಕೆ

ವಿಕಟಕವಿ

ಹ್ಞೂ, ಹೊತ್ತಾಯಿತು ನೆರೆಮನೆಯೂಟಕ್ಕೆ
ಅರಮನೆ ಕೂಟಕ್ಕೆ

(ಹೋಗುವರು. ತೆರೆ)

## ದೃಶ್ಯ ೨

(ಅರಮನೆಯ ದರ್ಬಾರ್ ಭವನಕ್ಕೆ ಹೋಗುವ ದಾರಿ. ಗಮಕಿ ಒಂದು ಕಾಗದವನ್ನು ಹಿಡಿದು ಓದುತ್ತಾ ತನ್ನಲ್ಲಿ ಚಿಂತಿಸುತ್ತಿರುವಾಗ ತೆರೆ ಏಳುತ್ತದೆ.)

ಗಮಕಿ

" ಓ ರಾಜ—ನಿನ್ನ ದಿಗ್ವಲಿತ ಕೀರ್ತಿ
ಕವಿಗೆರೆಯಿತು ಸ್ಫೂರ್ತಿ
ಕಂಗೊಳಿಸುವ ನಿನ್ನ ಮೂರ್ತಿ
ವೈರಿಯಾರ್ತಿ ಪೆಣ್ಣೆದೆಯರ್ತಿ"–
ಈ ಪದ್ಯಕಾವ ರಾಗ?
ನೀರಾಗವೆ ಸರಾಗ.
ರಾಗವಿಲ್ಲದೆಂಥ ಗಮಕ?
ಕೈಬಿಡೆಸಿದ ಹೊಂದುವನಕ

(ಮೂಂಡ್ ರಾಗದಲ್ಲಿ ರಾಗವೆಳೆದು ಓ ರಾಜ ಎಂದು ಹಾಡುತ್ತಿರುವಾಗ, ಅತ್ತ ಕಡೆಯಿಂದ ವಾಗ್ಮಿ ಬರುತ್ತಾನೆ.)

ಗಮಕಿ

ಓ ನಮಸ್ಕಾರ ವಾಗ್ಮಿಗಳಿಗೆ.

ವಾಗ್ಮಿ

ನಮಸ್ಕಾರ ಗಮಕಿಗಳಿಗೆ.

ಗಮಕಿ

ಕವಿ ಎಲ್ಲೋ ಕಾಣೆ.

ವಾಗ್ಮಿ

ವಿಕಟನನೂ ಕಾಣೆ.
ಇಂದೇನಾದರೂ ಉಂಟೋ.

ಗಮಕಿ

ಒಂದೆರಡೇ ಎಂಟುಂಟು.

ವಾಗ್ಮಿ

ಎಂಟು ! ಎಂಥ ಸುಯೋಗ.

ಗಮಕಿ

ಎಂಟು ಸಾಲು—ಎಂಟು ರಾಗ;
ಕವಿಯ ಯೋಗ, ನನ್ನ ಪುಣ್ಯ.

ವಾಗ್ಮಿ

ನಿಮ್ಮಿಂದಲೆ ಆತ ಗಣ್ಯ
ನಿಮ್ಮಿಂದಲೆ ಸುಕೃತಿ.

ಗಮಕಿ

ಸಲ್ಲದೆನಗೆ ಈ ಸ್ತುತಿ.
ಕೃತಿಯಿಂದಲೆ ನನಗೆ ಬೆಲೆ.

ವಾಗ್ಮಿ

ಕೃತಿಯೇಂ—ಬರಿ ಹಿನ್ನೆಲೆ
ಅದಕಿರದಿರೆ ನಿಮ್ಮ ಶಿಲ್ಪ—
ಎಲ್ಲ ಜನಕು ಅದು ಅಲ್ಪ
ಗಮಕವದರ ಶೃಂಗಾರ
ಅದರಿಂದದು ಬಂಗಾರ.

ಗಮಕಿ

ದಿಟ ಗೆಳೆಯರೆ ನೀವೊರೆದುದು,
ಗಮಕದ ಶ್ರಮ ಬಲುಹಿರಿಯದು
ಕವಿಗೋ ತಾ ಕವಿಯಾದರೆ ಸಾಕು
ಗಮಕಿಗೊ ಎಲ್ಲಾ ಕಲೆಗಳು ಬೇಕು :
ರಸವ ಹೊಳಸೆ ಕವಿ ಹೃದಯವು ಬೇಕು
ಕಸವ ಮರೆಮಾಚೆ ವಿಮರ್ಶೆ ಬೇಕು
ಅರ್ಥಸ್ಫುರಣೆಗೆ ಉಚಿತೋಚ್ಚಾರ
ಭಾವ ಹೊಳೆಯೆ ಭ್ರೂ ಹಸ್ತದ್ವಾರ

ಅರಿತಿರಬೇಕಿವ ಅಭಿನಯಕಲೆಯ
ಇಚ್ಛೆಗಾಯಿತೆನೆ ಸಹೃದಯಹೃದಯ
ಗಾಯನ ಸಂಮೋಹನ ಕಲೆ ಬೇಕು
ಏನು ಬೇಡಿವಗೆ ಎಲ್ಲವು ಬೇಕು
ಎಲ್ಲಕು ಮಿಗಿಲೆನೆ ನಿಮ್ಮಂಥರ ಕೃಪೆ ಬೇಕು

ವಾಗ್ಮಿ

ನಾವೇನಲ್ಪರು—ಪ್ರಭುಕೃಪೆ ಬೇಕು.

ವಿಕಟಕವಿ

(ಪ್ರವೇಶಿಸಿ)

ದಿಟ, ವಾಗ್ಮಿಗಳೇ,
ಎಲ್ಲದಕೂ ಪ್ರಭುಕೃಪೆಯಿರಬೇಕು
ಅದು ಇದ್ದರೆ ಎಲ್ಲಾ ಬಂಗಾರ.
ಇಲ್ಲದಿದ್ದರೋ ಬರಿ ಅಂಗಾರ.

ವಾಗ್ಮಿ

ಸೈ ಬಿಡು ನೀ ಕೋಡಂಗಿ

ವಿಕಟಕವಿ

ನಾನೇ ನಿನ್ನಿಯ ಭಟ್ಟಂಗಿ

ವಾಗ್ಮಿ

ಅಂತಾದರೆ ನನ್ನ ಕಲೆಗೆ ನಿನ್ನಯ ಮಾತೇನು ?

ವಿಕಟಕವಿ

ಅವಧಾರಿಸು, ಜೀಯಾ, ಹೇಳುವೆನು—
ಶಾರದೆಗಿವನಕ್ಕಸಾಲೆ
ಸೀನಾಕೆಗೆ ದರ್ಜಿ
ಭಾವಕಿಡುವೆ ಮಾತಿನಂಗಿ
ಅರಿತಿಲ್ಲರ ಮರ್ಜಿ.
ಧಿಷ್ಟ್ಯೋಯಿ ಸೀ ನಿಲ್ಲೆ

ನಾನೆನುವೆನು ಮನದಲ್ಲೆ :
ಇಗೊ ಹೊರಟಿತು ಮೆರೆವಣಿಗೆ
ಝುಣಝುಣಗುಟ್ಟುತ ದನಿಗೆ
ಪುಸ್ತಕಗಳ ಬಿಟ್ಟಿದ್ದು
ಠಕ್ಕೊಳು ಬಯಲಿಗೆ ಬಿದ್ದು
ಈ ಮನ ಆ ಮನ ಬೆರೆತು
ಹುಸಿನಿಜವೆರಡೂ ಕಲೆತು
ಎಲ್ಲ ಮನಕು ಸೊಗಸಾಗೆ
ಕೃತಿಕಾರರೆ ಬೆರಗಾಗೆ
ನಿನ್ನದೆಂಬ ಸೋಗಿನೊಳೆ
ಹೊಸತೆನೆ ನಾಜೋಕಿನೊಳೆ
ಹೊರಟಿತು ಜನರಂಜನೆಗೆ
ಇದಿಗೋ ನುಡಿಮೆರೆವಣಿಗೆ

ಗಮಕಿ

ಬಲು ಸರಿ, ಬಲು ಸರಿ, ಅಹ್ಹಾ

ವಿಕಟಕವಿ

ಬಂದರಿಗೋ ಕವಿ, ವಾದಿ
ಸರಸತಿಯಾಧಿವ್ಯಾಧಿ
ಓ, ಓ, ಜೊತೆಗೆ ಪ್ರಚಾರಣ ಮಂತ್ರಿ
ಈ ಚತುರಂಗದ ತಂತ್ರಿ.

(ಪ್ರಚಾರಣ ಮಂತ್ರಿಗೆ ಕವಿ ತನ್ನ ಕವನವನ್ನು ಓದುತ್ತಾ ಬರುತ್ತಾನೆ. ಪರಸ್ಪರ ಸಂದರ್ಶನ ವಂದನೆಗಳು ನಡೆಯುತ್ತವೆ.)

ಕವಿ

ಮಾಮರ ತಳಿತಿಹುದೇತಕ್ಕೆ?
ಕೋಗಿಲೆ ಸರಗೈಯಲಿ ಎಂದು.
ಹೂಗಿಡ ಮಲರಿಹುದೇತಕ್ಕೆ ?
ತುಂಬಿಯು ಬಂಬಲಿಸಲಿ ಎಂದು.

ಪಾರ್‍ಕ್ಗಳು ಹಚ್ಚನೆ ಹಸುರೇತಕ್ಕೆ?
ಗಂಕೆಯ ರಸವನು ಹೀರುತ್ತ
ಭಾವಾವೇಶವ ಹೊಂದಲಿ ಎಂದೇ
ಕವಿಜನ ಸಿಟ್ಟಿಸಿ ಬಾನತ್ತ!

ಪ್ರಚಾರಣ ಮಂತ್ರಿ

ಅಹ್ಹಹ್ಹಾ ದಿಟ ದಿಟ.

ಕವಿ

ತಳಿರನು ಕೊಯ್ಯುತ ಹುಂವರಕೆ
ಹೂಗಳನೆರಚುತ ಬಾವುಟಕೆ
ಮೆತ್ತನೆ ಪಾರ್ಕನು ತುತ್ತುಳಿದು
ಗದ್ದಲ ಮಾಡುತ ಮೊಮ್ಮೊರೆದು
ಜನ ಜಂಗುಳಿ ನೆರೆಯೆ
ರಸಹೀನತೆ ಮೆರೆಯೆ
ನಮ್ಮ ನಾಡಿಗೇ ಬಲು ಅವಮಾನ

ಪ್ರಚಾರಣ ಮಂತ್ರಿ

ದಿಟ ದಿಟ ನನ್ನಿಯ ನುಡಿ ಇದು

ಕವಿ

ಇಂಥದಕುಪವನವೇ ತಾಣ?

ಪ್ರಚಾರಣ ಮಂತ್ರಿ

ಉಹ್ಞು, ಅಲ್ಲ, ಅಲ್ಲ.

ಕವಿ

ದೇಶಾಭಿಮಾನರಾಹಿತ್ಯ
ಈ ಜನದೊಳು ಸತ್ಯ.
ಇವರಿಗೆ ಕಾರಾಗೃಹವೇ ನಿತ್ಯ.

ಪ್ರಚಾರಣ ಮಂತ್ರಿ

ಹ್ಹ ಹ್ಹ ಹ್ಹ—ನಿತ್ಯ.

ಕವಿ

ಇಂತಾಸ್ಥಾನದ ಕವಿಕೃತ ಕವನ
ಪ್ರಭುವಿಂದಾಗಲಿ ಸ್ತುತ್ಯ.

ಪ್ರಚಾರಣ ಮಂತ್ರಿ

ಭಲೆ ಭಲೆ ಕವಿಗಳೆ ಮೆಚ್ಚಿನ ಮಾಟ
ಗಮಕಿಗಳೆ, ಇದನಭ್ಯಾಸವ ಮಾಡಿ.

ಗಮಕಿ

(ಜನಾಂತಿಕ)

ಸಾಕಪ್ಪಾ ನನಗೀ ಕವಿಕಾಟ

(ಪ್ರಚಾರಣ ಮಂತ್ರಿಗೆ)

ಅಪ್ಪಣೆ ಹೊತ್ತೆನು ಶಿರದೊಳು ಸೂಡಿ.

(ಪ್ರಚಾರಣ ಮಂತ್ರಿ ವಾದಿಯ ಕಡೆ ತಿರುಗಿ ನೋಡಲು ವಾದಿ ಪುನಃ ಅವನಿಗೆ ವಂದಿಸಿ ತನ್ನ ವಾದವನ್ನು ಒಪ್ಪಿಸುವುದಕ್ಕೆ ಪ್ರಾರಂಭಿಸುವನು. ಅತ್ತ ಕವಿ ಗಮಕಿ ವಾಗ್ಮಿ ವಿಕಟಕವಿ ಹಿನ್ನೆಲೆಯಲ್ಲಿದ್ದಾರೆ.)

ವಾದಿ

ಸತ್ಯವೆ ಗೆಲ್ಲುವುದು.
ಅನೃತವು ಅಲ್ತು
ಇದು ಭವಿಷ್ಯತ್ತು.

ಗೆದ್ದುದೆ ಸತ್ಯ
ಸೋತುದೆ ಮಿಥ್ಯ
ಭೂತದ ರೀತ್ಯಾ.

ಪ್ರಚಾರಣ ಮಂತ್ರಿ

ಸರಿ, ಸರಿ, ಬಲು ಸರಿ.
ವರ್ತಮಾನದೊಳೊ ?

ವಾದಿ

ಸಂಗ್ರಾಮವೆ ಸತ್ಯ

ಶಾಂತಿಯೆ ಮಿಥ್ಯ
ಮಿಗಿಲೆನೆ, ಇದರಿತ್ಯರ್ಥಕೆ
ಸಮರವೆ ಮುಖ್ಯ
ಶಾಂತಿ ಅಸಹ್ಯ.

ಸಂಗ್ರಾಮದೊಳೇ ಸತ್ಯದ ಸುಳಿವು
ಸಂಗ್ರಾಮದೊಳೇ ಮಿಥ್ಯೆಯ ಅಳಿವು
ನನ್ನಿಯಾಸೆ ಜನಕೆಂದಿನವರೆಗೋ
ಅಂದುವರೆಗು ಹೋರಾಟವು ಸಿದ್ಧ
ಇದು ಸತ್ಯೋಪಾಸನೆ ಶುದ್ಧ
ಇದಕೆನುವರು ಯುದ್ಧ
ಈ ಯುದ್ಧ ಸಮರ್ಥನವಾದ
ಸಚಿವರಿಗೆಸಗಲಿ ಮೋದ.

ಪ್ರಚಾರಣ ಮಂತ್ರಿ

ಬಲು ಸೊಗಸಾಗಿದೆ ವಾದ.
ಇದಕಿಲ್ಲ ವಿವಾದ.
ಗಮನದೊಳಿಡಿ ವಾಗ್ಮಿಗಳೆ
ಇಂಥ ವಾದ ಜನಕೆ ಬೆಳೆ.

ವಿಕಟಕವಿ

ನಾನೊರೆವೆನು ಎರಡುಸಾಲು
ಇದ ನೆನಪಿಡೆ ನಿನಗೆ ಮೇಲು
ಬಿದ್ದವ ರಾವಣ ಗೆದ್ದವ ರಾಮ
ಇದೆಲ್ಲಾ ಕಾಲದ ನೇಮ
ಆದೊಡೆ, ಮಂತ್ರಿಗಳೇ,
ನಿನ್ನೆವರೆಗು ಜನ ಜಂಗುಳಿ ಮಿಥ್ಯ
ಸೈನಿಕರೇ ಸತ್ಯ.
ಇಂದೋ ಆ ಸೈನಿಕರೇ ಮಿಥ್ಯ.
ನಾವೇ ಸತ್ಯ.

ನಾವೇ ರಾಮ, ಅವರೇ ರಾವಣ.

(ವಿಕಟಕವಿ ಕೈತೋರಿಸುವ ಕಡೆಯಿಂದ ದಳಪತಿ ಪ್ರವೇಶಿಸುತ್ತಾನೆ.)

**ದಳಪತಿ**

ಎಲೊ ಕೋಡಂಗಿ, ಆರೋ ರಾವಣ?

(ಯಥೋಚಿತ ನಮಸ್ಕಾರಗಳು. ಪ್ರಚಾರಣ ಮಂತ್ರಿ ಮತ್ತು ಚತುರಂಗ ಮರೆಯಾಗುತ್ತಾರೆ.)

**ವಿಕಟಕವಿ**

ದಳಪತಿಗಳೆ—ಬಲು ಜರ್ಬಾಗಿದೆ ನಿಮ್ಮಂಗಿ

**ದಳಪತಿ**

ಅದು ಸರಿ, ಆರೋ ರಾವಣ ?

**ವಿಕಟಕವಿ**

ನಾನೇ ರಾವಣ, ರಾಮಾ ಶರಣು.

**ದಳಪತಿ**

ಹ್ಞ ನಾನೇತಕೋ ರಾಮ.

**ವಿಕಟಕವಿ**

ಸೇನೆಯೊಳಗೆ ಇಬ್ಬರೂ ಸಮ.

**ದಳಪತಿ**

ಹೇಗೋ ಮರ್ಕಟ ?

**ವಿಕಟಕವಿ**

ರಾಮನಂತೆ ನಿಮಗೂ
ಪ್ರಜೆಗಳುಂಟು, ಸೈನ್ಯವಿಲ್ಲ,
ಸೈನ್ಯವುಂಟು ಶಸ್ತ್ರವಿಲ್ಲ,
ಶಸ್ತ್ರವುಂಟು ಮದ್ದೆ ಇಲ್ಲ,
ಮದ್ದಿದ್ದರು ಗುರಿಯ ಬಲ್ಲ
ಭಟರ ಕಾಣೆ ದಳದೊಳು.

ಇಂತಿದ್ದರು
ಪ್ರಬಲರನೇ ಸೆಣಸುತಿಹರು
ಜಗದೆಲ್ಲಾ ಕಳದೊಳು.
ಆದೊಡೀಗ,
ಸಿಕ್ಕಿದವರನೊಕ್ಕುತಿಹರು
ಪುರದೆಲ್ಲಾ ಕಡೆಯೊಳು.

**ದಳಪತಿ**

(ನಗುತ್ತಾ)
ದಿಟ ಮಂಗಗಳೇ ಅವು.
ತಂಟೆಯ ಗೈದರೆ ಈ ದಿನವೂ ?

**ವಿಕಟಕವಿ**

ಅಪ್ಪಿಲ್ಲಾದರು ನಾವ್ ನಮ್ಮಪ್ಪಕ್ಕೆ
ಸುಮ್ಮನಿದ್ದರೂ, ನಮ್ಮದೃಷ್ಟಕೆ
ಸೆರೆಗೈದರು ಹಿಡಿದು
ನಾಯಕ ಬಹವರೆಗೂ ತಡೆದು.

**ದಳಪತಿ**

ಮಂಗಗಳು; ಮಂಗಗಳು !

**ವಿಕಟಕವಿ**

ಎಷ್ಟಾದರು ಸೈನಿಕರೇ ವಾಸಿ
ಸಾಕಪ್ಪಾ ಆ ಪೋಲೀಸರ ಘಾಸಿ.

**ದಳಪತಿ**

ಹೇಗೋ ಕೋಡಂಗಿ ?

**ವಿಕಟಕವಿ**

ನಸೆ ನಸೆ ಜಗಟು ಏನೂ ಇಲ್ಲ.
ಹಿಡಿ ಕಡಿ ಒಂದೇ ನುಡಿ ಬೇರಿಲ್ಲ.
ಬಂದರೆ ತೀರಿತು ದಳದ ಕಾಲರ

ಬಿಟ್ಟೊ ಬಿಡ ಪೋಲೀಸು ಚಳಿಜ್ವರ

ಐ. ಜಿ. ಪಿ. (ಪ್ರವೇಶಿಸಿ)

ಬಲು ತಲೆಹರಟೆ, ಹೆಚ್ಚಿದೆ ನೀನು

ದಳಪತಿ

(ನಗುತ್ತಾ)

ದಿಟ, ಐ. ಜಿ. ಪಿ., ಹೆಚ್ಚಿದನಿವನು.

ವಿಕಟಕವಿ

ನಮಸ್ಕಾರ, ನಮಸ್ಕಾರ
ನೀವೇ ಮುನಿದರೆ ಬದುಕುವರುಂಟೆ
ನಿಮ್ಮ ಕಣ್ಣೆದಿರು ನಿಲ್ಲುವುದುಂಟೆ—
(ಹೋಗುವನು)

ದಳಪತಿ

(ನಗುತ್ತಾ)

ಒಳ್ಳೆಯ ಮರ್ಕಟ
ಆ ವಿಕಟ.
ಸೈನ್ಯ, ಪ್ಲೇಗು ಕಾಲರ
ಪೋಲೀಸು, ಚಳಿಜ್ವರ!

ಐ. ಜಿ. ಪಿ.

ದಿಟವನೆ ಹೇಳಿದ ಕೋಡಂಗಿ.

ದಳಪತಿ

ಬಿಡು ಅವನೊಬ್ಬ ಕಮಂಗಿ.

ಐ. ಜಿ. ಪಿ.

ಅಂತಲ್ಲ ದಳಪತಿ—
ಮಿಕ್ಕ ರಾಜ್ಯದಿ ಸೈನ್ಯ ಚರ್ಮದಂತೆ
ನಾಡಿನೊಕ್ಕಲ ಮಾಂಸಖಂಡದಂತೆ.
ಬಿಳಿರಕ್ತ ಕಣದಂತೆ ಕಾಹುದಳ ಪೋಲೀಸು—

ಇಲ್ಲೊ ನಾವೇ ಜಾಡ್ಯ ವಿಕಟನೊರೆದಂತೆ—
ಈ ಪಾಪಿ ದೇಶದೊಳು ಎಲ್ಲ ವಿಪರೀತ.
ನಮ್ಮ ಕಂಡರೆ ಎಲ್ಲ ಜನಕು ಶೀತ.

**ದಳಪತಿ**

ದೊಂಬಿಕೋರರ ತೆರದಿ ಮಾತನಾಡುತ್ತಿರುವೆ
ಶಿಸ್ತುಂಟು, ನ್ಯಾಯವುಂಟು
ಅವನು ಕಾಪಿಡುವುದಕೆ ನಾನುಂಟು ನೀನುಂಟು
ಇವ ಮುರಿವ ಪುಂಡರಿಗೆ ಶಿಕ್ಷೆಯುಂಟು.

ಐ. ಜಿ ಪಿ.

(ನಗುತ್ತಾ)

ನ್ಯಾಯ, ಶಿಸ್ತು, ಶಿಕ್ಷೆ, ನಮಗೆ ದಕ್ಕದ ಮಾತು.
ಇದರರ್ಥ ವಿವರಣೆಗೆ ನೀವು ನಾನೆಂತು?
(ನ್ಯಾಯಾಧೀಶ ಮತ್ತು ರಾಜನೀತಿ ವಿಶಾರದ ಪ್ರವೇಶಿಸುವರು)
ನಮಸ್ಕಾರ, ನಮಸ್ಕಾರ.
ನಾನು ದಳಪತಿ ಕೂಡಿ ನ್ಯಾಯ ಶಿಸ್ತೆನ್ನುತ್ತ
ವಾದವನೆ ಹೂಡಿಹೆವು ನಿಂತು.

**ರಾಜನೀತಿ ವಿಶಾರದ**

ಇದ್ದುದನು ಇದ್ದಂತೆ ಇರಿಸುವುದೆ ಶಿಸ್ತು

**ನ್ಯಾಯಾಧೀಶ**

ನ್ಯಾಯವದಕೂ ಮುಂದು, ಇದರ ವಸ್ತು
ರಾಜ್ಯದಿಚ್ಛಾಶಕ್ತಿ—ಇದರ ನಡೆ ಪ್ರಗತಿ.

**ದಳಪತಿ**

ಲೇಸು, ನ್ಯಾಯಾಧೀಶ, ಇದಕ್ಕೆನ್ನ ಸಮ್ಮತಿ.

**ರಾಜನೀತಿವಿಶಾರದ**

ರಾಜ್ಯದಿಚ್ಛಾಶಕ್ತಿ—ಇದರ ಅರ್ಥವೇನು?

**ದಳಪತಿ**

ಇದನು ವಿವರಿಪೆ ನಾನು.

ಇದು ಕೆಲವು ದೇಶದೊಳು ಆಳುವವನಿಚ್ಛೆ
ಮತ್ತೆ ಕೆಲವೊಳು ಪ್ರಜಾನಾಯಕನ ಇಚ್ಛೆ
ಇನ್ನು ಕೆಲವೆಡೆಯಲ್ಲಿ ಅರಸು ಒಕ್ಕಲು ಕೂಡಿ
ತರ್ಕ ತರ್ಕಿಸಿ ಕೊನೆಗೆ ಮೂಡಿಪಿಚ್ಛೆ
ಮತ್ತಿಂಥ ನಾಡಿನೊಳು ಸಾಮ್ರಾಟರಿಚ್ಛೆ.
ಈ ಇಚ್ಛೆಗೊಳಪಡುವುದೇ ನ್ಯಾಯ, ಬೇರಿಲ್ಲ.
ಒಳಪಡಿಸೆ ಇರುತಿಹೆವು ನೀವು ನಾವೆಲ್ಲ.

(ಹೀಗೆ ಮಾತಾಡುತ್ತಾ ಮುಂದೆ ಸಾಗುವಾಗ ಪ್ರಧಾನಿ ನಾಲ್ವರು ಅಮಾತ್ಯರೊಡನೆ ಪ್ರವೇಶಿಸುತ್ತಾನೆ. ತೆರೆ ಎದ್ದು ಓಲಗಶಾಲೆಯನ್ನು ತೋರಿಸುತ್ತದೆ. ಪ್ರಧಾನಿ ಉದ್ವಿಗ್ನನಾಗಿದ್ದಾನೆ.)

ಪ್ರಧಾನಿ

ದೊರೆಗೇನೆನ್ನಲಿ, ಪ್ರಜೆಗೇನೆನ್ನಲಿ,
ಸಾಮ್ರಾಟ ಪ್ರತಿಸ್ಪರ್ಧಿಗೇನೆನ್ನಲಿ
ನನಗೇನೆನ್ನಲಿ, ನಿಮಗೇನೆನ್ನಲಿ
ಏನನೊಲ್ಲದೀ ಜನಕೇನೆನಲಿ ?

೧ನೆಯ ಅಮಾತ್ಯ

ಪ್ರಭುವಿಗೆ ಕಾಟ ಪ್ರಜೆಗೂ ಕಾಟ
ನಮ್ಮೆಲ್ಲರಿಗೂ ಹೆರವರ ಕಾಟ
ಹೆರವರ ತಾಳಕೆ ಪ್ರಜೆಗಳ ಕುಣಿತ
ಇವರೀ ಕುಣಿತಕೆ ಅವರೀ ಮೊರೆತ
ಈ ಮೊರೆತಕೆ ನಮಗೀ ಮನದಿಂತ
ಇದ ದೇವರೆ ಅರಿತ

೨ನೆಯ ಅಮಾತ್ಯ

ನಮ್ಮೀ ನಾಡಿನೊಳೇಕೀ ಚಳವಳಿ ?
ಸ್ವಾತಂತ್ರ್ಯಕೆ ಸೆರೆಮನೆಯೇ ಬಳಿ ?
ಈ ಮೂಢರಿಗಿದೆ ಹೆರವರ ಬಳುವಳಿ

೩ನೆಯ ಅಮಾತ್ಯ

ಬಿಡುಗಡೆ ಬಿಡುಗಡೆ ಬರಿ ಬರಿ ಕೂಗು
ಇದಕಾಗಿದೆ ನಾಡೊಲುಮೆಯ ಸೋಗು
ಬಾಳೇ ಬಂಧನ ಸಾವೇ ಬಿಡುಗಡೆ
ಬಾಳ್ವೆವೆಲ್ಲರೂ ಜನವಿದನರಿತೊಡೆ

೪ನೆಯ ಅಮಾತ್ಯ

ನೆರೆಬಂದರೆ ನೆರೆಯೊಡನೇ ತೇಲ್ವುದು ಲೇಸು
ವ್ಯರ್ಥ ಶ್ರಮ, ಬರಿಬಳಲಿಕೆ ನೆರೆ ಎದುರೀಸು
ಏ ಬಲ, ಏ ಸಾಧನ ಸಂಪತ್ತಿದೆ ಎಂದು
ಸಾಮ್ರಾಜ್ಯವನಿದುರಿಸಿ ಜನ ನಿಂತಿದೆ ಇಂದು?

ಪ್ರಧಾನಿ

ನಂಬುವರನ್ನೇ ನಂಬಿಸುವಂತಹ ಮಾತು.
ಹಾ, ನಮ್ಮೊಡೆಯರು ಈ ವಾದಕೆ ಸೋತು
ಇಂದಿನ ಮಂತ್ರಕೆ ಕಿವಿಗೊಡುವರೊ ಕಾಣೆ
ಏನಾದರು ಕರ್ತವ್ಯವ ಮಾಡದೆ ಮಾಣೆ

(ಜಯ ಪರಾಕ್ ಎಚ್ಚರಿಕೆ ಸ್ವಾಮಿ ಎಚ್ಚರಿಕೆ ಎಂದು ಸ್ಪಷ್ಟವಾಗಿ ಕೇಳಿಬರುತ್ತದೆ.)

(ವಂದಿಮಾಗಧರು ದರ್ಬಾರ್‌ಭಕ್ಷಿ ಇವರೊಡನೆ ರಾಜ ಬರುತ್ತಾನೆ.)

ರಾಜ

ಎಚ್ಚರಿಕೆ, ಎಚ್ಚರಿಕೆ
ಹೆಜ್ಜೆ ಹೆಜ್ಜೆಗೆಚ್ಚರಿಕೆ!
ಏನಾಪದಕೆಚ್ಚರಿಕೆ?
ಅರಮನೆ ಇದು, ಹಳುವಲ್ಲ.
ಹಿತವರಿಲ್ಲಿ, ಹಗೆ ಇಲ್ಲ.
ಇಲ್ಲೇತಕೆ, ಎಚ್ಚರಿಕೆ
ಹಳುವೇ ಹದುಳಕೆ ಎಂದೋ

ಹಗೆಯೋ ಹಿತವರು ಎಂದೋ
ಹೊಗಳುಭಟರೆ ನಿಮ್ಮರಿಕೆ?
ಸಾಕಿನ್ನೀ ಎಚ್ಚರಿಕೆ
ನೀವಿರಲಿನ್ನಿವರೇಕೆ
ಪೀಠವ ಕೊಳ್ಳಿ ಪ್ರಧಾನಿ.
ಮಂತ್ರಿವರರೆ, ಸೇನಾನಿ
ಎಲ್ಲರು ಕುಳ್ಳಿರಿ. ಎಲ್ಲಿ?
ನಮ್ಮ ವಿಕಟಕವಿ ಎಲ್ಲಿ?

ವಿಕಟಕವಿ

(ಠೀವಿಯಿಂದ ಪ್ರವೇಶಿಸಿ)

ಹಾಜರೊಡೆಯ ಅಡ್ಡಬಿದ್ದೆ.

ರಾಜ

ಕೋಡಂಗಿ ನೀನೆಲ್ಲಿದ್ದೆ?

ವಿಕಟಕವಿ

ಹತ್ತರೊಡನೆ ನಾ ಹನ್ನೊಂದಾಗದೆ
ಮೇಲೊಂದಾಗಲು ಹಿಂದಿದ್ದೆ.
ಇಂತೊಡೆಯರ ಲಕ್ಷ್ಯಕೆ ಬಿದ್ದೆ.

ರಾಜ

(ನಗುತ್ತಾ)

ದಿಟ, ನಾನಿನ್ನು ಪೇಕ್ಷೆಗೈದಿದ್ದೆ.
ಬಾ ಬಾ ಸನಿಯಕೆ, ಇಲ್ಲಿ ಕುಳ್ಳಿರು.
ನೀನಿಲ್ಲದೆ ಎಂತಹ ದರ್ಬಾರು?

ವಿಕಟಕವಿ

ನಾನಿಲ್ಲಿಹ ಸೌಭಾಗ್ಯಕೆ, ಓ ನನ್ನ ದಣಿ
ದಳಪತಿಗಳ ನಾಯಕರಿಗೆ ನೀವಿಂದು ಋಣಿ.
ಅವನಿಂದೆನಗಾಯಿತು ಸಮ್ಮುಖದೊಳು ಮಾನ
ಇಲ್ಲದಿರಲು ಎಲ್ಲರಿದಿರು ಸೆರೆಮನೆಯವಮಾನ

ರಾಜ

ಕೌತುಕವೀ ಸಂಗತಿ—ಕೇಳಿದಿರಾ ದಳಪತಿ ?

ವಿಕಟಕವಿ

ಆವರಿಗರಿಕೆಯಾಗಿದೆ.

ರಾಜ

(ಪ್ರಚಾರಣ ಮಂತ್ರಿಯ ಕಡೆ ನೋಡಿ)

ಪುರದ ಸುದ್ದಿ ಹೇಗಿದೆ ?

(ಪ್ರಚಾರಣಮಂತ್ರಿ ಏಳುತ್ತಿರುವಾಗ, ವಿಕಟಕವಿ ಅವನನ್ನು ಗಮನಿಸದೆ.)

ವಿಕಟಕವಿ

ಪುರಜನರ ಕೋಪ
ಬಾಲಕರ ಶಾಪ
ಕಾಪರಾಟೋಪ
ದಳದ ಪ್ರತಾಪ
ಶಾಸಕರ ತಾಪ
ಹೆಂಗಳ ವಿಲಾಪ
ಎಲ್ಲರಾಲಾಪ—
ಸುದ್ದಿ ಇಂತು ಭೂಪ.

ರಾಜ

ಹ್ನ ಈ ದಿನವೂ ಹೀಗೆಯೇ ?

ವಿಕಟಕವಿ

(ಏಳುತ್ತಿರುವ ಪ್ರಚಾರಣ ಮಂತ್ರಿಗೆ ಅವಕಾಶಗೊಡದೆ)

ಕ್ಷಮಿಸಿರಿ ಬುದ್ಧಿ
ಇದು ನಿನ್ನೆಯ ಸುದ್ದಿ
ಈ ಕಷ್ಟದ ಕಬ್ಬವನು
ಪ್ರಾಸದ ಹಬ್ಬವನು
ವ್ಯರ್ಥಮಾಡೆ ಮನಬಾರದೆ
ಇಂತೊಡೆಯರಿಗೊರೆದೆ.

ರಾಜ

(ನಗುತ್ತಾ)

ಸರಿ, ಸರಿ,
ಈ ದಿನವೇನಾಯಿತು, ಅದನೊರೆ ಮಡೆಯ.

ವಿಕಟಕವಿ

ಹಸಾದ ಒಡೆಯ.
ಜನ ಬಾವುಟ ಹಿಡಿದೂಳಿತು
ಮಾಕಾಳಿಗೆ ಜಯವೆಂದಿತು
ದಳ ಬೆಂಗಾವಲ ಮಾಡಿತು
ನಾ ಜಯವೆನ್ನಲು ಹಿಡಿಯಿತು
ನೋಟತ್ತರೆ ಬೇಡೆಂದಿತು
ಒಡೆಯರ ಕವಿ ಹಾಡೆಂದಿತು
ನಾ ಹಾಡಲು ಹೂಗುಟ್ಟಿತು
ನಾಯಕ ಬರೆ ಬಿಟ್ಟಿತು

ರಾಜ

ನೆಚ್ಚಿನ ದಳ, ಮೆಚ್ಚಿನ ದಳ
ಸ್ಪೃಹೆ ಇಲ್ಲದೆ ಕರ್ತವ್ಯವ ಮಾಡುವ ದಳ
ದಳವಾಯಿ ಭಲ ಭಲ.

ದಳವಾಯಿ

ಎಲ್ಲಕು ಪ್ರಭುಕೃಪೆಯೇ ಕಾರಣ
ನಾವೀ ಗುಣದ ದರ್ಪಣ.

ವಿಕಟಕವಿ

ನೋಡಿಕೊಳ್ಳಿರಿ ಕೋಶಾಧ್ಯಕ್ಷ
ಈ ಕಾರುಣ್ಯದ ಸೆಲೆ ಬತ್ತದೊಲು !

ರಾಜ

(ನಗುತ್ತಾ)

ದಿಟ, ಕೋಡಂಗಿ.

ಎಚ್ಚರದಿಂದಿರಿ ಕೋಶಾಧ್ಯಕ್ಷ.

ದಳವಾಯಿ

ಜೀಯಾ, ಮನವನು ಕುತ್ತುವ ಮಾತು.
ಹಣಕಲ್ಲವು ಗುಣಕೆ ಸೋತು
ಸೇವೆಯ ಕೊಂಡೆವು ನಾವು.

(ರಾಜನು ವಿಕಟಕವಿಯನ್ನು ನೋಡುವನು.)

ವಿಕಟಕವಿ

ಕೋಪಿಸಕೂಡದು ತಾವು.
ಚಂಡಕಿರಣಕರ ಸಾಗರದ ನೀರ-
ನೆತ್ತಿ ಕೆರೆ ತುಂಬುವಂತೆ
ಕೋಶ ತುಂಬ ಸಿರಿ ತಮ್ಮಿಂದಲೆ ಸರಿ
ತಾವು ಪ್ರಭುತಾಪದಂತೆ.

ರಾಜ

(ನಗೆಭಾವದಲ್ಲಿ)

ವಾದ ವಾದ ಸಮವಾಯಿತು ದಳವಾಯಿ.
ಕೋಡಂಗಿ, ಇನ್ನು ಮುಚ್ಚು ಬಾಯಿ.

(ಅವನು ಹಾಗೆಯೇ ಮಾಡುವನು.)

ಬಕ್ಷಿ, ಮುಂದಿನ ಕಾರ್ಯಕ್ರಮವೆಂತು?

ಬಕ್ಷಿ

ಮಹಾಪ್ರಭು, ಇಂತು—
ಕವಿಯ ಹಾಡುಂಟು
ಗಮಕಿಯೋದುಂಟು
ವಾಗ್ಮಿ ವಾಗ್ವಿಭವವುಂಟು.
ಲೇಸು ಈ ಯುದ್ಧ
ಎಂಬ ಸುಸಿಬದ್ಧ
ವಾದಿ ವಾದವುಂಟು.

**ರಾಜ**

ಆಗಬಹುದೇ ಪ್ರಧಾನರೆ?

**ಪ್ರಧಾನಿ**

ಒಡೆಯರ ಇಚ್ಛೆಗೆ ಇದಿರೆ?

**ರಾಜ**

ತಮಗೆ ಬಿನದ ಸೇರುವಂತೆ ತೋರದೀ ದಿನ.

**ಪ್ರಧಾನಿ**

ದಿಟ, ವಿನೋದಕಿಂದು ಹಗುರವಲ್ಲವೀ ಮನ.

**ರಾಜ**

ಏಕಮಾತ್ಯವರ್ಯ ?

**ಪ್ರಧಾನಿ**

ಇಂದಂತಿದೆ ರಾಜ್ಯಕಾರ್ಯ.

**ರಾಜ**

(ಸುತ್ತ ನೋಡಿ)

ಹಾಯ್ ಹಾಯ್
ನಮಗು ಮುದಕು ಬಲುದೂರ.
ಆದೊಡೇಕೆ ಈ ಆಸರ
ನಮ್ಮ ಮಿತ್ರಪ್ರಪಂಚಕೆ
ಮೀಸಲಿಹುದು ಗೀತಪಾಲಿ
ಸಲ್ಲಾಪಾನಂದಕೆ.

(ಸೂಚನೆಯನ್ನರಿತು ಸಭೆಯವರು ನಮಸ್ಕರಿಸಿ ಹೊರಡುವಾಗ ವಿಕಟಕವಿಯೂ ಹೊರಡುವನು.)

**ರಾಜ**

ನೀನೂ ಹೋಗಬೇಕೆ, ವಿಕಟ.

**ವಿಕಟಕವಿ**

ನಿಲ್ಲಬೇಕೇ, ಪ್ರಭು, ಅಹಹಾ!

ರಾಜ

ನಮ್ಮ ಸಮ್ಮುಖದೊಳಷ್ಟು ಕಷ್ಟವೇ ?

**ವಿಕಟಕವಿ**

ಮೌನದಿಂದಿರುವುದಷ್ಟು ಸುಲಭವೇ ?

ರಾಜ

(ನಗುತ್ತಾ)

ಮರಳಿ ಇತ್ತಿಹೆವು ಮಾತಿನ ದಾನ.
ಕಳೆಯಬೇಡವೋ ನಮ್ಮಯ ಮಾನ.

(ಪ್ರಧಾನಿ, ಅಮಾತ್ಯರು, ಪ್ರಚಾರಣ ಮಂತ್ರಿ, ವಿಕಟಕವಿ, ರಾಜ — ಇಷ್ಟು ಜನ ಉಳಿಯುತ್ತಾರೆ.)

ರಾಜ

ಏನಾಲೋಚನೆ, ಮಂತ್ರಿಗಳೆ ?

ಪ್ರಧಾನಿ

ಜನದ ಹುಚ್ಚು ಹೆಚ್ಚುತಿದೆ
ಹುಚ್ಚೇ ಕೆಚ್ಚಾಗುತಿದೆ
ಈ ಸರ್ಕಾರದ ಭೀತಿ
ತುಸವೂ ಇಲ್ಲದ ರೀತಿ.

ರಾಜ

ಪಾಪ ಪಾಪ, ಬಡಪ್ರಜೆ
ಇವರಡಸಿದೆ ಒಂದು ರುಜೆ.
ಎಲ್ಲಿ ಜ್ವರಕು ಮೂರು ದಿನ
ಎಂದಿರುವುದಿಲ್ಲವೆ ವಚನ ?

೧ನೆಯ ಅಮಾತ್ಯ

ಇದು ಸಾಂಕ್ರಾಮಿಕ, ಜೀಯಾ,
ಹಬ್ಬಲು ಬಿಡೆ ಬರು ಅಪಾಯ.

ರಾಜ

ಎಚ್ಚರಿಕೆ—ಅಪಾಯ !
ಕೈಯಾಡಿಸೆ ಜನ ಅಪಾಯ
ಕಾಲಾಡಿಸಲದೆ ಅಪಾಯ
ಹೋ ಎಂದರು ಅಪಾಯ
ಹಾ ಎಂದರು ಅಪಾಯ
ಮರಳಮೇಲಿನಡಿಪಾಯ
ನಮ್ಮ ರಾಜ್ಯಕೆ.
ಹೂಂ, ಪೇಳಿರೇನುಪಾಯ
ಈ ಅಪಾಯಕೆ ?

ವಿಕಟಕವಿ

ಹ್ಞೂ ಎನುವುದೇ ಇದಕುಪಾಯ.

ರಾಜ

ಆರಿಗೆ ಹ್ಞೂ ?

ವಿಕಟಕವಿ

ಸಚಿವರ ಮಂತ್ರಕೆ ಹ್ಞೂ
ಸಚಿವರ ಮಂತ್ರದ ತಂತ್ರಕೆ ಹ್ಞೂ
ಸಚಿವರ ಮಂತ್ರದ ತಂತ್ರದ ಯಂತ್ರಕೆ ಹ್ಞೂ.
ಹಿಡಿ ಬಡಿ ಕೊಲ್ಲಿರಿ ತಿವಿ ಹ್ರೀಂ
ಮುತ್ತು ಕವಿ ಹ್ರಾಂ.
ಓಂ ನಮೋ ರಾಜ್ಯತಂತ್ರಾಯ.
ಎನ್ನುವುದೇ ಇದಕುಪಾಯ.

ರಾಜ

ನಿಮ್ಮಾಲೋಚನೆ ಇದುವೇ ?

ಪ್ರಧಾನಿ

ಲಾಲಿಪುದಿದ ಪ್ರಭುವೇ.
ಔಷಧ ಕಹಿಯಲ್ಲದೆ ಸಿಹಿ ಎಂತಾದೀತು?
ನೋಯದೆ ಶಸ್ತ್ರಚಿಕಿತ್ಸೆ ಎಂತಾದೀತು?
ಹದ್ದಿನೊಳಡದೆಯೆ ಹುಚ್ಚನ ಹುಚ್ಚೆಂತಿಳಿದೀತು?
ಅಂಕುಶವಿಡದೆಯೆ ಆನೆಗೆ ಮತ್ತೆಂತಾರೀತು?
ಮೃದುಹೃದಯದಿ ಕರ್ತವ್ಯವ ಮಾಡದೆ ಇರಲು
ಆರಿಗೆ ಹಿತವಹುದೊಡೆಯಾ? ಇದೆ ನನ್ನ ಹವಾಲು.

ರಾಜ

ಸರಿ, ಸರಿ ಮುಂದೇನು?

ಪ್ರಧಾನಿ

ಆ ಗುಂಪೊಡೆಯನ ಹಿಡಿಯುತ ನಿರ್ಬಂಧಿಸಬೇಕು
ಅವನನುಯಾಯಿಗಳೆಲ್ಲರ ಸೆರೆಯಿಡಬೇಕು
ಜನ ಗುಂಪಾಗಲು ಆಸ್ಪದಕೊಡದಿರಬೇಕು
ನೆರೆತವ ಚೆದರಿಸಬೇಕು
ನುಡಿತವ ನಿಲ್ಲಿಸಬೇಕು.

ವಿಕಟಕವಿ

ಇಂಗ್ಲೆಂಡ್ ದೇಶದಿ ದೊರೆ ಒಬ್ಬಿದ್ದ
ಒಮ್ಮೆಗೆ ಕಡಲೆಡೆ ನಿಂತಿದ್ದ
ಅಲೆಗಳೆ ನಿಲ್ಲಿ—ನಾಸಿಹೆನಿಲ್ಲಿ
ಎಂದೇ ಆಣತಿ ಕೊಡುತಿದ್ದ.

ಪ್ರಚಾರಣ ಮಂತ್ರಿ

ಅವನೊರೆದುದು ಜಡ ಜಡಧಿಗೆ
ಜೀವಂತರಿಗಲ್ಲ.
ನೋಯುವ ಕಾಯುವ ದುಃಖಕೆ
ಹೇಸುವ ಜನಕಲ್ಲ.

ವಿಕಟಕವಿ

ಈತನ ಶಸ್ತ್ರಂಗಳು ಕತ್ತರಿಸವು
ಈತನ ಸುಡಲರಿಯದು ಬೆಂಕಿ.
ಪ್ರಭು ಯಾರೀತ ?

ರಾಜ

ಸಾಕು ಮುಡೆಯು, ಆತ ವಾತ.

ವಿಕಟಕವಿ

ದಿಟ ಪ್ರಭು ದಿಟ.
ಅಲೆ ಕುಣಿವುದು ಗಾಳಿಗೆ
ಜನ ಬಿಡುಗಡೆ ಕಾಳಿಗೆ
ಹಿಡಿದಿಡಿರೀ ಗಾಳಿಯನು
ಸಂತೈಸಿರಿ ಕಾಳಿಯನು
ಆಗಳೆ ಶಾಂತಿ
ಎನ್ನುವಸೀ ವೇದಾಂತಿ.

ರಾಜ

ಇದು ಸಾಧ್ಯವೆ, ಮಂತ್ರಿ ?

ಪ್ರಚಾರಣ ಮಂತ್ರಿ

ಕಾಳಿ ಬರುವಳಾವೇಶವ ಕೊಳ್ಳುವಗೆ
ಅವನೊಯ್ಯಿರಿ ಸೆರೆಗೆ
ಇದೆ ಬಿನ್ನಪ ದೊರೆಗೆ.

ರಾಜ

ಪಾಪ ಪಾಪ, ಅವ ಗೈದಿಹ ತಪ್ಪೇನು ?

ಪ್ರಧಾನಿ

ಈ ಕೋಲಾಹಲ ದೊರೆಗೊಪ್ಪೇನು ?

ರಾಜ

ನಮ್ಮರಮನೆಯೀ ಗವಾಕ್ಷದಿಂದ
ನೋಡುತಿದ್ದೆವಾ ಜನದಾನಂದ.
ಆಹ, ಏನುಲ್ಲಸ, ಏನುತ್ಸಾಹ
ನಮ್ಮಾಣತಿಗಿಂತಹುದೇ ಆಹಾ!
ಭೀತಿಯುಳಿದು ಬೇಕಾದುದನೊರೆದು
ನೋವ ಸಾವ ಲೆಕ್ಕಿಸದೇ ನೆರೆದು
ಹಿಂದಾಗಿ ಹೋದ ಹಿರಿಮೆಯ ನೆನೆದು
ಇಂದಿನ ಹಳಿಬಾಳನು ಹೀಗರೆದು
ನಮ್ಮರಸುತನಕೆ ಹಿತವನೆ ಬಯಸಿ
ನಾಡಿನೇಳಿಗೆಯ ಹಾರೈಸಿ
ನೆರೆದಿತ್ತೀ ಮಂದಿ
ಅಮಿತೋತ್ಸಾಹವನೊಂದಿ.
ದೇವರೆ ಬೆರಗಾಗುವ ನೋಟ
ಈ ಜನದೀ ಬಾಳ್ಕೆಯ ಹೊಮ್ಮಾಟ.
ಇದ ನೋಡುತ ನಲಿದಿದ್ದೆವು ನಾವು.
ಆದೊಡೆ ನೀವು
ಜನ ಬಿಟ್ಟಂಜಿಕೆ ನಿಮ್ಮನೆ ಹೊಕ್ಕಿತೆನೆ
ಧೃತಿಗು ಮತಿಗು ಬಿಮ್ಮನೆ ಕದವಿಕ್ಕಿತೆನೆ
ರಕ್ಕಸತನಕೆಡೆಗೊಟ್ಟರಿ
ಮರ್ಯಾದೆಯ ಬಿಟ್ಟರಿ.
ನೆರೆ ನಾಚುತ ನಾನಡಗಿದೆನಿಲ್ಲಿ
ಪ್ರಜಾಹಿಂಸಕಗೆ ದೊರೆತನವೆಲ್ಲಿ
ಎನ್ನುತ ಗುದುಗುಟ್ಟುತ ಮನದಲ್ಲಿ.
ಈ ಘೋರವ ಮರುಕೊಳಿಸೆನ್ನುವಿರಿ
ಸಮ್ಮತಿಯಿದಕೆಂತೀಯಲಿ ಉಸಿರಿ.

ಪ್ರಧಾನಿ

ಪ್ರಭು, ಇದು ಸಾಮ್ರಾಟ ಪ್ರತಿನಿಧಿಯಾಜ್ಞೆ
ದಯಪಾಲಿಸಬೇಕನುಜ್ಞೆ.

ರಾಜ

ಹ್ಞಾ—ಹ್ಞಾ ಅಪರಾಜ್ಞೆ—
ನಮ್ಮನುಜ್ಞೆ!
ಮೊದಲೇ ಇಂತೇಕುಸಿರದಿದ್ದಿರಿ
ತೊತ್ತೇ ಇದಗ್ಯೆ ಎನ್ನದೆ ಇದ್ದಿರಿ
ಜೀಯಾ ಎಂದಿರಿ ಒಡೆಯಾ ಎಂದಿರಿ
ಭೂಪಾ ಎಂದಿರಿ ಪ್ರಭುವೇ ಎಂದಿರಿ.
ನಾ ದೊರೆಯೋ, ಬರಿ ತೊತ್ತೋ, ಹೇಳಿರಿ.
ಹಿರಿದೋ, ಕಿರಿದೋ ನಮ್ಮದು ನಾಡು
ತಪ್ಪೋ ಒಪ್ಪೋ ಆಳುವ ಪಾಡು
ನಮ್ಮದು—ಇದಕೆಲ್ಲ
ರಾಜಪ್ರತಿನಿಧಿಯಾಣತಿ ಬೇಕಿಲ್ಲ.

ಪ್ರಧಾನಿ

ಪ್ರಭು, ಇಂತೆನುವಂತಿಲ್ಲ.

ರಾಜ

ಎಂದರೆ ?

ಪ್ರಧಾನಿ

ಅವರ ಮುಳಿಸು ರಾಜ್ಯಕೆ ಲೇಸಲ್ಲ.

ರಾಜ

ಹಾಯ್, ಹಾಯ್, ದಿಟ ದಿಟ.
ಎರವಲು ತಂದಿಹೆವೀ ದೊರೆತನವ
ನಾವರಿತಿರಬೇಕಿವರನುನಯುವ
ಹಾಯ್, ಹಾಯ್!

ಇವರೊಳಗಿಂತಿಹುದು ನಮ್ಮಯ ಕಾಲು
ನಮ್ಮರಸುತನವೋ, ಬರಿಹಾಲು.

(ಚಿಂತಾಕ್ರಾಂತ ಮೌನಿ ಪೀಠವನ್ನು ಇಳಿದು ನಡೆದಾಡುತ್ತಾನೆ. ಹಿಂಬಾಲಿಸಿ ವಿಕಟಕವಿ ಹೆಜ್ಜೆ ಇಕ್ಕುತ್ತಾನೆ. ಮಿಕ್ಕವರೆದ್ದು ಮಿಕ ಮಿಕನೆ ನೋಡುತ್ತಿದ್ದಾರೆ.)

ವಿಕಟಕವಿ

ನನ್ನೊಡೆಯಾ

ರಾಜ

ಏನದು ಮುಡೆಯಾ

ವಿಕಟಕವಿ

ಒಂದೂರಿನಲ್ಲಿ ಒಬ್ಬರಸಿದ್ದ
ಆವನುಡುಪೆಂದರೆ ಬಹು ಪ್ರಸಿದ್ಧ.
ಒಮ್ಮೆಗೆ ಓಲಗದೊಳು ಕುಳಿತಿರಲು
ಬಂದರೆಡೆಗೆ ಇಬ್ಬರು ದರ್ಜಿಗಳು.

ರಾಜ

ಹೂಂ

ವಿಕಟಕವಿ

ಕಂಡೂ ಕಾಣದ ತೆರ ನವಿರಾಗಿಹ
ಗಾಳಿಗು ಆಕಾಶಕು ತೆಳುವಾಗಿಹ
ಸೋಜಿಗದುಡುಪನು ಹೊಲಿಯುವೆವೆಂದು
ಆಣೆಯನಿಟ್ಟರು ಎಲ್ಲರ ಮುಂದು—

ರಾಜ

ಹೂಂ.

ವಿಕಟಕವಿ

ಅರಸಗೆ ಉಡುಪೆಂದರೆ ಬಲು ಆಸೆ
ನಂಬಿಸಿತವನೀ ಠಕ್ಕರ ಭಾಷೆ.

ರಾಜ

ಹೂಂ.

ವಿಕಟಕವಿ

ಒಂದು ವರುಷ ಗಡುವನು ಕೇಳಿದರು
ರಾಶಿ ಹೊನ್ನ ಮುಂಗಡ ಕೇಳಿದರು.
ಉಡುಪಿನಾಸೆಗರಸಸ್ತು ಎಂದ.
ಅವರೆರೆತಕೆಲ್ಲ ಹೂ ಎಂದ.

ರಾಜ

ಸಾಕು, ಕತ್ತೆ, ನನಗೀ ಕತೆ ಬೇಕಿಲ್ಲ.

ವಿಕಟಕವಿ

ಪ್ರಭು, ನಾನೊರೆಯಲು ಮುಂದಾದುದನು
ಕೌತುಕಪಡುವಿರಿ—ನಿಲ್ಲಿಸಲೇನು ?

ರಾಜ

ಮೂರ್ಖನಿಗೊಲ್ಲೆ ಎಂದವರುಂಟೆ
ಹೇಳಿ ಮುಗಿಸು.

ಪ್ರಧಾನಿ

(ಜನಾಂತಿಕ)

ಸಾಕೀತನ ತಂಟೆ.

ವಿಕಟಕವಿ

ಇಂತು ಬೊಕ್ಕಸವ ಬರಿದನು ಮಾಡಿ
ನೆಯ್ಯುವ ಹೊಲಿಯುವ ಆಟವ ಹೂಡಿ
ಜಾಣರಿಗೇ ಇದು ಕಾಣುವುದೆಂದು
ಸಾಮಾನ್ಯರಿಗೋ ಅಲ್ಲೆಂದು
ಬಂದವರಿಗೆಲ್ಲ ಬಯಲನೆ ತೋರಿ
ಇಲ್ಲದುಡುಪಿನಂದವನೇ ಸಾರಿ
ಎಲ್ಲರ ನಂಬಿಸಿದರು ದರ್ಜಿಗಳು.

ಇದರ ಮಾತನಪಗೂಲಜ್ಜಿಗಳು
ಸಾರಿದರೆಲ್ಲೆಡೆ—ಜಾತ್ರೆ ನೆರೆಯಿತು.
ದೊರೆ ಉಡುಪನುಡುವ ದಿನ ಏರ್ಪಟ್ಟಿತು
ಉಟ್ಟನರಸನೀ ಬಯಲುಬಟ್ಟೆಯ
ಚಿತ್ತಲಿಯೊಳೆ ಕೊಂಡನು ಜನದಿಟ್ಟಿಯ.
ಅಯ್ಯೋ, ಬರಿ ಮೈ ಎಂದರು ಜನ ಮನದೊಳಗೆ
ಆಹಾ ವಸ್ತ್ರದ ನವಿರೆಂಥದು ಎಂದರು ಹೊರಗೆ.
ಆದೊಡೆ ಮಗುವೊಂದು
ಅಮ್ಮಾ ಚಿತ್ತಳಿಬಸವನ ನೋಡೆಂದು
ಚಪ್ಪಳೆಯಿಕ್ಕಿತು—ಎಂಥ ದಿಟ್ಟತನ !
ಹೌದೇ ಬರಿ ಚಿತ್ತಳಿ! ಎಂದರು ಊರ ಜನ.
ದಿಟ ದಿಟ ಪಿಸುಗುಟ್ಟಿತು ಪರಿವಾರ
ಅಳುಕಿ ಅಳುಕಿ ಹೌದೆಂದಿತು ಸರಕಾರ.
ಆಗರಸನು ಬೆಚ್ಚಿ
ಕೆಟ್ಟೆನಿವರ ನೆಚ್ಚಿ
ಎನ್ನುತ ಅವಮಾನಕೆ ಕಣ್ಮುಚ್ಚಿ
ಓಡಿದನರಮನೆಗೆ.
ತಿಂಗಳವರೆಗೂ ಬಾರದೆ ಹೊರಗೆ—
ಪ್ರಭು, ಏನೆನ್ನುವಿರೀ ಕತೆಗೆ?

ರಾಜ

ಹಾಯ್, ಹಾಯ್ ದಿಟ, ಕೋಡಂಗಿ
ನಮಗಿವರಿತ್ತೀ ದೊರೆತನದಂಗಿ
ನಿನ್ನೀ ಕತೆಯಂಗಿ.
ಈ ಬಯಲಂಗಿಯ ಮೆರೆಸುತ ನಿತ್ಯ
ಲೋಕದ ನಗೆಪಾಡಾದೆವು ಸತ್ಯ.

ವಿಕಟಕವಿ

ಹಾಯ್, ಹಾಯ್ ಬಿನದಕೆ ನಾನೊರೆದೀ ಕತೆ
ಜೀವಕೆ ಆಯ್ತೇ ಅಕಟ—

ಪ್ರಧಾನಿ

ತುಸ ಮೌನವನಾಂತಿರು ವಿಕಟ.—
ಪ್ರಭು, ಈತನ ವಿಪರೀತದ ಮಾತಿಗೆ
ಅರೆದಿಟವೊರೆವೀ ವ್ಯಂಗ್ಯದ ರೀತಿಗೆ
ಮನಕಾಲಸ್ಯವ ತಂದುಕೊಳುವುದೇ
ವಂಶದ ಮಾಹಾತ್ಮ್ಯವ ಮರೆಯುವುದೇ ?
ನಮಗೀ ಪರಕೀಯರ ಸಂಬಂಧ
ಘಟಿಸಿದೆ ದೈವಪ್ರೇರಣೆಯಿಂದ.
ಕಟ್ಟಿಡವಿಯ ಪುಣ್ಯಾಶ್ರಮವೆಂತು
ಇವರಾಸರೆಯೊಳು ನಾಡಿಹುದಿಂತು.
ಸ್ವಾತಂತ್ರ್ಯವೆ ನಮ್ಮೆಲ್ಲರ ಬಯಕೆ.
ಹಲತೆರವೀ ಹಂಬಲಿಕೆಯ ಸಲಿಕೆ—
ಹೇಮಾವತಿ ಕಾವೇರಿಯ ಸೇರಿ
ಕಡಲ ಹಾರೈಸೆ ತಪ್ಪೇ ದಾರಿ ?
ಹೆಸರಿಗೆ ಅವರದು ಈ ಸಾಮ್ರಾಜ್ಯ
ನಿಜದೊಳು ನಮ್ಮೆಲ್ಲರ ಸಾಮ್ರಾಜ್ಯ
ನಮಗಿದರಾದರಣೆಯೊಳೇ ಮುಕ್ತಿ
ಇದರ ಪೋಷಣೆಯೆ ಈಗಿನ ಯುಕ್ತಿ.
ಇಂದವರಿಗೆ ಹೊಗೊಡುವುದೆ ಭದ್ರ.
ಇದು ಆಕ್ಷೇಪನವೆಂದೊಡೆ ಕ್ಷುದ್ರ.

ವಿಕಟಕವಿ

(ತನಗೆ ತಾನೆ)

“ ಗಂಗೆ ಯಮುನೆ ಕೂಡಿ ಹರಿದು
ಸಂಗಮ ಜಲ ಬಿಳಿದು ಕರಿದು.”

ರಾಜ

(ಸ್ವಲ್ಪ ಹೊತ್ತು ಸುಮ್ಮನಿದ್ದು—ಘಕ್ಕನೆ ನಕ್ಕು)

“ ಗಂಗೆ ಯಮುನೆ ಕೂಡಿ ಹರಿದು
ಸಂಗಮ ಜಲ ಬಿಳಿದು ಕರಿದು ”—

ಆಹ, ಚೆನ್ನು ಚೆನ್ನು ಬಲು ಚೆನ್ನಾಯ್ತು
ನಮ್ಮೀ ಕೋಡಂಗಿಯ ಮಾತು.
“ ಗಂಗೆಯಮುನೆ ಕೂಡಿ ಹರಿದು
ಸಂಗಮಜಲ ಬಿಳಿದು ಕರಿದು.”
ಸಿನ್ನದೆ ಮಾತಿದು ಗೆಳೆಯ ?

**ವಿಕಟಕವಿ**

ಉಹ್ಞ. ನಮ್ಮೀ ನಾಡಿನ ಮೆಚ್ಚಿನ ಕವಿಯ.

**ರಾಜ**

ನಾವರಿಯದ ಕವಿಯೂ ನಮ್ಮ ನಾಡಿನೊಳುಂಟು ?

**ವಿಕಟಕವಿ**

ಆತಗು ಜನಕೂ ನಂಟು--
ಈ ಎತ್ತರಕೇರ.

**ಪ್ರಧಾನಿ**

ಪ್ರಭು !

**ರಾಜ**

ಮರೆತೆ ಮರೆತೆ, ಮಂತ್ರಿವರ
ತನ್ನಿ ತನ್ನಿ ಲೇಖನಿ
ಬೇಗ ಮುಗಿಯಲೀ ಕಣೆ.

(ಪ್ರಧಾನಿ ತಂದುಕೊಟ್ಟುದನ್ನು ಓದುವುದಕ್ಕೆ ಮೊದಲುಮಾಡಿ ಹ್ಞೂ ಎಂದು ತಾತ್ಸಾರದಿಂದ ಓದದೆ ಕೆಳಗೆ ರುಜುಮಾಡಿ ಲೇಖನಿಯನ್ನು ಬಿಸಾಡಿ)

ಪಾಪ ಪಾಪ ಬಡಜಂತು—

**ವಿಕಟಕವಿ**

ಮುಗಿಯಿತಪ್ಪ ಕೊನೆಗಂತು
ಜೈ ಪರಾಕೆಚ್ಚರಿಕೆ ಸ್ವಾಮಿ ಎಚ್ಚರಿಕೆ.

ರಾಜ

(ನಗುತ್ತಾ)

ಇದು ‘ ಹೊರಡಿ ’ ಎಂಬರಿಕೆ.

ವಿಕಟಕವಿ

ಅಲ್ಲ ಪ್ರಭು—ಅಲ್ಲ.
ಅತ್ತಣವರು ಮರಳಿ ಬೆರೆದು
ಇತ್ತಣವರು ಅವರಿಗೊರೆದು
ಹೊತ್ತುಮಾಡಪಂತೆ ಚಿತ್ರವೆಸಗಬೇಡವೆ?
ಜೈ ಪರಾಕ್ ಎಚ್ಚರಿಕೆ—

(ರಾಜ ನಗುತ್ತಾ ಹೊರಡುತ್ತಾನೆ. ಈ ದನಿಯನ್ನು ಕೇಳಿ ಮಿಕ್ಕ ಸಾಮಾಜಿಕರೆಲ್ಲರೂ ನೆರೆಯುತ್ತಾರೆ—ಮಂತ್ರಿಗಳು ಅವರವರ ಕಾರ್ಯಾಧ್ಯಕ್ಷರಿಗೆ ಆಣತಿಯನ್ನು ಪಿಸುಮಾತಿನಲ್ಲೂ ಸನ್ನೆಯಲ್ಲೂ ಕೊಡುವಾಗ ತೆರೆ ಬೀಳುತ್ತದೆ.)

ವಿನ್ಯಾಸಾಂಕ ಮುಗಿಯಿತು

## ಉಪನ್ಯಾಸಾಂಕ

**೧೯೪೫-೬**

(ಹಿಂದಿನ ಅಂಕದಲ್ಲಿ "ವಾದಿ" ಯಾದವನು ಕೋಡಂಗಿಯಂತೆ ವೇಷ ಹಾಕಿಕೊಂಡು ಬರುವನು)

**ಕೋಡಂಗಿ**

ಅಂಕವಲ್ಲ ಇದು—ಇದು ವಿಷ್ಕಂಭ
ಏನು ಹೇಳಲಿಮ್ಮ ಕವಿಯ ಜಂಭ
ಆಂಗ್ಲರಂಕಕ್ಕೆ ಆಂಗ್ಲರ ಭಾಷೆ
ಎಂದವ ಬಳಸಿದ ಏನು ತಮಾಷೆ!
ಆತಗೆ ಅದೆ ಮೆಚ್ಚಾಗಿದೆ ಪೂರ
ಆದೊಡೆ ನಮಗದಕೂ ಬಲು ದೂರ
ಆಂಗ್ಲರಿರದೆ ಈ ನಾಟಕವಿಲ್ಲ
ಅವರ ನುಡಿಯನೀ ಕವಿ ತುಸ ಬಲ್ಲ
ಪ್ರಾಸವಿಟ್ಟೆ ಎಲ್ಲವನೂ ಬರೆದ
ಆದೊಡೇನು ರೆಸಿಡೆನ್ಸಿಯು ಬಿನದ
ರಂಗಕೆ ಬಾರದೆ ಕರಡೊಳೆ ಉಳಿಯಿತು
ಕವಿಗೂ ಮನದೊಳಗೀ ಕೊರಗುಳಿಯಿತು.
ಸೂತ್ರಧಾರನದನೊಪ್ಪಲೆ ಇಲ್ಲ.
ವಿಕಟಕವಿ ಎಂದ—"ಇವನೇಬಲ್ಲ?
ಎಷ್ಟು ಹಣ ಸುರಿದೆವಾವೀ ನುಡಿಗೆ
ಹಕ್ಕಿಲ್ಲವೆ ಇದ ಕೆಡಿಸಲು ನಮಗೆ?
ಷೇಕ್ಸ್ಪಿಯರ್ ಜೇಡ-ಹಾಗೂ ಕಡಮೆಯೆ
ನಮ್ಮೀ ಕವಿ! ಇವಗೀ ಬರಿ ಮಡಿಮೆಯೆ"
ಇಂತವನೆನೆ ಕವಿ ಕೊರಗನು ಮರೆತು
ಜಿಲಿಯರಿವರಿಲ್ಲ ವಿಕಟನ ಹೊರತು
ಎನ್ನುತ ತಾಳ್ಮೆಯ ತಳೆದನು ಮನದಿ.

ಆಹಾ ಗುರುವಿಕಟನು ಬಲು ಬಿನದಿ.
ಹೋಗುವ ಜನದಾ ನುಡಿ ನಮಗೇಕೆ?
ಕನ್ನಡದುಪ್ಪುಂಡೀ ಜನವೇಕೆ
ರಂಗದೊಳಾದರು ಕನ್ನಡ ನುಡಿಯು
ನುಡಿಯ ಬಾರದು? ಇದ ಕವಿ ತಿಳಿಯ.
ಆಂಗ್ಲ ಭಾಷೆಯುಚ್ಚರಿಸಲು ಬಲ್ಲ
ನಟರೆವ್ಯಾಟದೊಳಿಲ್ಲವೆ ಇಲ್ಲ.
ನಮ್ಮ ನಾಲಗೆಗು ಆ ತಿರಿಚಿಲ್ಲ.
ಕೊನೆಗೂ ಕವಿಯಿದ ಬರೆಯಲೆ ಇಲ್ಲ
ಕನ್ನಡದೊಳು—ಅದರಿಂ ಕತೆ ತಿಳಿಸೆ
ಬಂದಿಹೆ-ಇನ್ನೀ ಮಾತನು ಬೆಳಸೆ.
ವಿಕಟಕವಿಗು ವಿಶ್ರಾಂತಿಯು ಬೇಕು
ಮತ್ತಾರಿಗುಂಟು ಆತನ ಜೋಕು
ಆತಗೆ ಪ್ರಿಯ ಶಿಷ್ಯನು ನಾನು
ಅದರಿಂ ದೊರೆಯಿತು ಸುಪಾರಿ-ಪಾನು
ನಿಮ್ಮ ಮುಂದೆ ಬಂದೀ ತೆರ ನಿಲ್ಲೆ
ಅವನ ಹದವ ನಾನೊಬ್ಬನೆ ಬಲ್ಲೆ.—
ಇರಲಿ.
ತವಿಸಿರಲು ನೆಲ ಬಿಡುಗಡೆಗೆ
ಆ ಕಡೆ ಉರಿದೆದ್ದನು ಆಂಗ್ಲ ಹಗೆ
ಹಿಟ್ಲರ್-ಆತನೊಬ್ಬ ಶಿವಲೀಲೆ
ಹಗೆದನೇಕೆ ಸ್ಟಾಲಿನ್ನನ ಮೇಲೆ?
ಜರ್ಮ್ಮ ಗರಡಿಯು ಎಲ್ಲಾ ಪಟ್ಟೊ
ರಷ್ಯ್ಯ ಕರಡಿಯು ಮೋಗಡೆ ಛಟ್ಟು.
ಆದೊಡೆ ಬೆಚ್ಚಿತು ಮೊದಲಬ್ಬರಕೆ
ಆಂಗ್ಲರ ಜಗವಾ ಪಡೆಯುಬ್ಬರಕೆ
ಎಲ್ಲೆಡೆ ಹರಡಿತು ಈ ಹೃತ್ಕಂಪ

ಕೆಡಿಸಿತು ಜಪಾನಿನಾಸೆಯ ಜೊಂಪ
ಸರಿ, ಎಚ್ಚರುತದು ರಾಹುವಿನಂದ
ಲೋಕವ ನುಂಗಲು ಇತ್ತೆಡೆಯಿಂದ
ಮೊದಲಿಟ್ಟಿತು–ನುಂಗಿತು ನೆಲವೆಲ್ಲ.
ಆದೊಡೆ ಬರಿತಲೆ ಕರುಳೇ ಇಲ್ಲ.
ನಮ್ಮ ದೇಶಕೂ ಚಾಚಿತು ನಾಲಗೆ
ಬ್ರಿಟಿಷ್ ಸಿಂಹದೀ ತಣಿಗೆಯ ಕೂಳಿಗೆ
ಮುಸುಡ ತೆಗೆದು ಗುರುಗುಟ್ಟಿತು ಸಿಂಹ
ಅಂಜಿಸಿತದನೀ ನಿರ್ಪ್ರ ಗುಮ್ಮ
"ದುಡಿದೊಡೆ ನಮಗೆ, ನಿಮ್ಮದು ನಿಮಗೆ
ಸ್ವರಾಜ್ಯವಪ್ಪುದು ವಿಜಯದ ಗಳಿಗೆ"
ಎನುತವ ಸಂಧಿಗೆ ಬರೆ, ಒಪ್ಪದೆ ತೊರೆ ಎಂದೇ
ನೀನಿದನೀ ಕ್ಷಣ ಬಿಡುವುದೆ ಲೇಸೆಂದೇ
ನುಡಿಯೆ ಮಹಾತ್ಮರು—ಹಗೆ ಬೇರೆಡೆಗೆ—
ಏನಾಸೆಯೋ ಏನಾಯಿತೋ ಅವಗೆ—
ಹಡಗಿನ ಪಡೆಗಳ ಈ ಕಡಲಿಂದ
ಥಟ್ಟನೆ ತಿರುಗಿಸೆ ಹರಿದಯದಿಂದ,
ಸಂಧಿಗೆ ಬಂದವ ಹಿಂತೆಗೆದನಲಾ
ವಂದನಾರ್ಹರನು ಬಂಧಿಸಿದನಲಾ
"ತೊರೆ, ತೊರೆ" ಎಂದಾಕ್ರೋಶಿಸೆ ಯುವಜನ
ಹಲ್ಕಡಿದರು "ಪೊರೆ, ಪೊರೆ" ಎಂಬ ಜನ.
ಅತಿದುಃಖಿಗೆ ಕಟ್ಟೇನಿದೆ ಹೇಳಿ
ತಪ್ಪೋ ನೆಪ್ಪೋ ದೇವರ ಕೇಳಿ
ಹುಚ್ಚೆದ್ದಿತು ಜನ ಕೆಚ್ಚೊಳು ಕೆರಳಿ
"ತೊಲಗಿ ಬ್ರಿಟಿಷರೇ ಬಂದುದು ಬರಲಿ."
ನೆನೆದೊಡೆ ನನಗೂ ಮೈ ಜುಮ್ಮೆನ್ನುವುದು
ಇಂಥ ಕ್ರೋಧವೇ ಹದುಳವೆನಿಪುದು.

ಬದುಕಬೇಕೆ ದೀಪದ ಕರುಕಂತೆ
ಬಾಳಿನ ತೇಜದ ಕುಡಿ ಕೆಡುವಂತೆ?
ಈ ಧೀರಾತ್ಮರ ಮೈಯೇ ಮಣ್ಣು
ಬೆಳೆದು ಫಲಿಸೆ ನಲ್ಲಾಸೆಯ ಹಣ್ಣು.
ಅವರ ರಕ್ತ ಆ ವೃಕ್ಷಕೆ ನೀರು
ಬೆಳೆವುದಿಂತು ಕಣಸಿನ ಕಲ್ಪತರು—
ನಿಶ್ಶಸ್ತ್ರರಿಂತು ಶಸ್ತ್ರವೆತ್ತಲು
ಉರಿಗು ಮಿಗಿಲು ಹೊಗೆಯಾಡಿತೆತ್ತಲು
ಹಬ್ಬಿತು ಕತ್ತಲು ಎದೆಎದೆಯೊಳಗೆ
ಎಲ್ಲರೊಳೂ ಮೂಡಿತು ಕರುಳ ಧಗೆ.
ಆದೊಡೆ ಬೆನ್ನೊಳೆ ವಿಧಾತ ನಗುವ
ಆರಿಗು ಏನೂ ಸ್ಥಿರವಲ್ಲೆನುವ
ಬಂಧನದೊಳೆ ಬಿಡುಗಡೆಯನು ಬೆಳೆವ
ಬಿಡುಗಡೆ ಎಂದಿರೆ ಬಂಧನಕೆಳೆವ.
ಜಯಮುದವೇರಲು, ಬಗೆ ಕೆಡುತ ಹಗೆ
ನಿಲಲರಿಯದೆ ಮೈಸೋಲುತ ಮಲಗೆ,
ಪುರದಾಹಕನೇತ್ರಾಗ್ನಿಯ ಹರ
ಮಿತ್ರರ ವಶವಾಗಿಸೆ—ಈ ಬವರ
ಕೊನೆಗೊಂಡಿತು ಜಯ ಜಯ ರವದೊಳಗೆ.
ಅಣುಬಾಂಬಿನ ಜಸವೆಲ್ಲೆಡೆ ಮೊಳಗೆ.
ಅದೆ ಸೈಕ್ಲೋಪ್ಸು—ಜಗವದರ ಗವಿ
ನಾವೆಲ್ಲರು ಅದರಾಹಾರದ ಅವಿ.
ಇರಲದು—ಒಡಿಸ್ಸುಸ್ಸು ಇಹನೆಮಗೆ
ತೋರುವನಿದರಿಂ ಪಾರಾಗುವ ಬಗೆ—
ಅಂತು ಗೆದ್ದರು—ಇಳಿಯಿತು ಪಿತ್ತ
ಇವರಾದರು ಗಜಭುಕ್ತಕಪಿತ್ಥ
ತಿರುಳು ತೀರಿ ಆಕಾರವುಳಿಯಿತು.

ಸಾಲವೇರಿ ವೈಸಾಲವುಳಿಯಿತು.
ಕಡಲ ಮುದಿಯ ಹೆಗಲಿಳಿವೆನು ಎಂದ.
ಅವನಿಗೊ ನುಡಿ ಚೆಂದ ಕೈ ಮಂದ.
ಅಲ್ಲವ ಬಿಟ್ಟರು ಇಲ್ಲಿವ ಬಿಡನು.
ಅಲ್ಲವ ಕೊಟ್ಟರು ಇಲ್ಲಿವ ಕೊಡನು
ದೇವರು ಕೊಟ್ಟರು ಕೊಡ ಪೂಜಾರಿ
ಗಿಟ್ಟಬೇಕಿವಗೆ ಇವನ ಮಜೂರಿ
ಗೆದ್ದೆವೆಂದು ಏನಿವನದು ಜೋರು
ನಮ್ಮ ಮೇಲಬ್ಬ ಏನು ಹುಜೂರು
ಗಿರಿಭಕ್ಷಕ ವನಭಕ್ಷಕನಿವನು
ತನುಮನ ಸರ್ವಂಭಕ್ಷಕನಿವನು.
ಆದೊಡೆ ಮೆರೆವನು ರಕ್ಷಕನಂತೆ
ಬೇಡಬಲ್ಲನಿವ ಭಿಕ್ಷುಕನಂತೆ
ಆ ಫಂಡ್, ಈ ಫಂಡ್, ಊ ಫಂಡೆಂದು
ನೊಂದ ಜನಕೆಲ್ಲ ತಾ ಫ್ರೆಂಡೆಂದು.
ವೇದವ ನುಂಗಿದ ವಾದವ ತಂದ
ಮಾನ ನುಂಗಿ ಮೇನವ ಕೋ ಎಂದ.
"ಹಾಸ್ಯವಾದರೂ ದಾಸ್ಯವೆ ಲೇಸು
ನಿಮ್ಮ ಬಿಂಕ ನಮ್ಮಯ ಶಹಬಾಸು
ನಮ್ಮ ಕಛೇರಿಯೆ ರಾಣೀವಾಸ
ಬುದ್ಧಿವಂತರಿಗೆ ಇದೆ ಕೈಲಾಸ."
ಇವನೀ ಹುಂಕೃತಿ ನಮ್ಮ ಕಿಂಕೃತಿ
ನಮಗಿದರಿಂದಲೆ ಲೋಕತಿರಸ್ಕೃತಿ
ನಮ್ಮ ದೇವರ್ಷಿಪಿತೃಗಳ ಧಿಕ್ಕೃತಿ
ಇವನೀ ದರ್ಪಕೆ ವಿಶ್ವಪುರಸ್ಕೃತಿ
ಇವನ ಯಂತ್ರಕ್ಕೆ ಈ ನೆಲವನ್ನ
ನಮಗದರ ಕಕ್ಕಲೇ ಮಿಷ್ಟಾನ್ನ

ಅದರ ಬೇಹಾರಿಯೋ ಸಂಪನ್ನ
ಇದ ಛೀ ಎನ್ನುವ ಮರುಳ ವಿಪನ್ನ
ಹಳ್ಳಿ ಹಾಳು ದಿಲ್ಲಿಯೊಳೂ ಗೋಳು
ಜನಗಳಿಗೆಲ್ಲಾ ಶೀಲವೆ ಜಾಳು.
ಆದೊಡೆ—ನೇಹಿಗರೇ
ಒಣಗುತ್ತಿದೆ ನಾಡಿನ ಬಂದಳಿಕೆ
ಚಿಗುರುತ್ತಿದೆ ನಮ್ಮಾಸೆಯ ಮೊಳಕೆ
ಇನ್ನೀ ದುರ್ಬಲ ನಮ್ಮನದುಮುನು
ಭಿಕಾರಿ ಇಂದೀ ನರವಾಹನನು.
ನಮ್ಮ ನೇಹವಿಂದೀತನ ಪುಣ್ಯ.
ಇದನುಳಿಸಿಕೊಂಡರಿವನೇ ಧನ್ಯ.
ಪದದಿಂದುರುಳಿದ ಚರ್ಚಿಲ್ ನಾಯಕ
ಸಮರ ವಿನೋದಿ—ಭೀತಿದಾಯಕ
ಇನ್ನಾತನ ವಿಷವಿಲ್ಲೀ ಸರ್ಪಕೆ
ಬೆದರುವರಾರೀ ಬರಿಹೆಡೆ ದರ್ಪಕೆ
ದೊರೆಗೂ ಈ ಸಂದರ್ಭವೆ ಇಷ್ಟ
ತಪ್ಪಿತಲಾ ರೆಸಿಡೆನ್ಸಿಯ ಕಷ್ಟ
ಅವರ ಸುತ್ತ ಗೇರಾಯಿಸಿಕೊಳುವ
ಸರ್ಕಾರದವರ ಪಾಡೇನೆನುವ
ಆರ ಮಂತ್ರಕೂ ಕಿವಿಗೊಡರವರು
ಅವರದೆ ಲೇಖನಿ ಅವರದೆ ಮೊಹರು.
ಅವರಿಗೆ ಸಲಹೆಕಾರ ವಿಕಟಕವಿ
ಆತಗೀಗ ಆಂತರಿಕನ ಪದವಿ.
ಸೆರೆಯಿದ್ದವರಿಗೆ ಬಿಡುಗಡೆಯಾಯ್ತು
ಜಯಜಯಕಾರಕೆ ಕೊರಲೆಡೆಯಾಯ್ತು.
ಜನಜನಕೂ ಮರುಕೊಳಿಸಿದೆ ಜೀವ.
ಈ ಹೊಮ್ಮೊಳು ಲೆಕ್ಕಿಸರೈ ಸಾವ

ಜೀವ ಬರಲು ಕುಣಿಯುತ್ತಿದೆ ಆಸೆ
ಇನ್ನೂ ಅದಕಿಲ್ಲೊಂದು ನಕಾಸೆ
ಹಿಂತಿರುಗುತ್ತಿದೆ ಆ ಮೆರೆವಣಿಗೆ
ಮುಂಗಡೆ ಬಲು ವಾದ್ಯಗಳುರವಣಿಗೆ !
ಕಿವಿಗಿಂಪಿಲ್ಲೀ ಬಹು ಶ್ರುತಿಮೇಳ.
ಹೊಡೆವ ಡೋಳಿಗೂ ಅನೇಕ ತಾಳ.
ಗಾನವಿಲ್ಲ ಬರಿಗದ್ದಲವೀಗ
ಕೊರಲಿದ್ದವನಾವನೀಗ ಕೂಗ :
ಹರಹರಮುಹದೇವಲ್ಲಾಹೋ ಅಕಬರ್
ಪೀತಾಂಬರ್ ಪೈಗಂಬರ್ ದಿಗಂಬರ್
ನಮ್ಮದೀ ನಾಡು—ನಮ್ಮದು ನಾಡು
ನೀವಿರುವೆಡೆ ನಮಗದು ಸುಡುಗಾಡು—
ಹಬ್ಬುತ್ತಿದೆ ಈ ಸೊಲ್ಲುಗಳ ಗುಡುಗು
ಬೊಬ್ಬೆಯಿಡುತ್ತಿದೆ ಮತಗಳ ಪಿಡುಗು.
ನಾನರಿತಿಹೆ ಕೆಲವರ ಆತುರವ
ಅವರೈಹಿಕ ಭೋಗದ ಕಾತರವ.
ಅವರಿಗೆಲ್ಲ ಒಂದೊಂದೇ ಜನ್ಮ.
ಕರ್ಮವೆಲ್ಲವನು ತೊಳೆವುದು ಕಲ್ಮ.
“ಇರುವವರೆಗು ನೀನಾಗೆಲೊ ಲೋಲ.
ನೀ ನೋಡಿಕೊಳ್ಳೊ ನಿನ್ನನುಕೂಲ.
ಸತ್ತಮೇಲೆ ನಿನಗಿದೆ ನಿಡುನಿದ್ದೆ.
ಒಳ್ಳೆ ರಂಗಿನೊಳು ಬಾಳೆಲೊ ಮೊದ್ದೆ”
ನಮಗಿಹುದಾತುರ ಇವರಷ್ಟಿಲ್ಲ.
ಇಂದಿಲ್ಲದಿರಲು ಮುಂದಹುದಲ್ಲ!
ತಾಳಿ ತಾಳಿ ಎನ್ನುವುದೇ ಮಂತ್ರ
ತಾಳ್ಮೆಯಿಲ್ಲದಿರೆ ಬಾಳೆ ಅತಂತ್ರ
ಕರ್ಮ ಬೆಂಬಿಡದು ಯಾರು ಸ್ವತಂತ್ರ

ಯಂತ್ರಿ ಅವನು ನಾವೋ ಬರಿಯಂತ್ರ—
ನಾವಿಂತಾತುರವಿಲ್ಲದೆ ಇಹೆವು
ಇದರ ದಿಟ ಸುಳ್ಳನೆಂತು ಬಲ್ಲೆವು
ಆದೊಡೆ ನನಗಿದೆ ಈ ಸಂದೇಹ
ಆರಿಗಿಲ್ಲ ಇಹಭೋಗದ ದಾಹ?
ಒಂದೇ ಜನ್ಮದೊಳಷ್ಟು ಬಾಳನೂ
ಬಾಳಲು ಸಾಧ್ಯವೆ? ಇದನವ ಕೇಳನು
ಸುಖದುಃಖಗಳಿಷ್ಟಿಷ್ಟನು ಸವಿದು
ಹಲವು ಮಜಲಿನೊಳು ಭವವನು ನಡೆದು
ನಿರಾಯಾಸದೊಳು ಮನೆ ತಲಪೆ, ಹಿತ.
ಇಂತು ನಡೆವರಿಗೆ ಅಹಿಂಸೆ ವಿಹಿತ.
ಇದು ನನ್ನ ಮತ—ಇದ ವಿಕಟಕವಿ
ಒಪ್ಪಿಹನಿದಕಾಗಲಿ ನಿಮ್ಮ ಕಿವಿ.
ನಮ್ಮ ಮತಿಗೆ ಆರೋಗ್ಯವೆ ಬಯಕೆ
ಇಂದಿನ ಮತಸಾಂಕ್ರಾಮಿಕ ಭಯಕೆ
ಮತ ಮತಗಳ ತುಸ ವಿಷವನು ಕೊಳ್ಳಿ
ಚಿತ್ತರಕ್ತಕದನೊಗ್ಗಿಸಿಕೊಳ್ಳಿ.
ಎಲ್ಲಾ ದೇವರಿಗೂ ಶರಣೆನ್ನಿ
ಆದೊಡೆ ದೇಶಕೆ ಜಯ ಜಯವೆನ್ನಿ

(ಒಳಗೆ "ಏಳಿರಯ್ಯ" ಎಂಬ ಗೀತದ ಸೂಚನೆಯಾಗುವುದು.)

ಓಹೋ, ನನಗಿಂತಲು ನಟರಾತುರ ಹೆಚ್ಚು.
ಇನ್ನು ತಳುವಿದೊಡೆ ಆಗುವೆ ಪೆಚ್ಚು.
ಈ ಅಂಕದಿ ನೋಡುವಿರೀ ಕದನ
ವಿಕಟಕವಿಯ ಬಲು ಬಿನದದ ಹದನ.

(ಮರೆಯಾಗುವನು. ಅಂಕದ ತೆರೆಯೇಳುವುದು.)

## ದೃಶ್ಯ ೧

### ಸಾರ್ವಜನಿಕೋದ್ಯಾನ

(ಯುವಕರು ಕೋಲಾಟವಾಡುತ್ತಾ ಕುಣಿಯುತ್ತಾರೆ)

**ಹೇಳಿರಯ್ಯ ಹೇಳಿ ಜಯ ಭಾರತಮಾತೆ**
ಜಯ ದುಃಖಪ್ರಾತೆ
ಜಯ ನಿರ್ಭೀತೆ
ವಿಖ್ಯಾತೇೇೇ.

ಸೋತೆನೆಂಬ ಸೊಲ್ಲೆ ಇಲ್ಲದಂಥ ಪುಣ್ಯವಂತೆ
ಬಂದ ನಂಜನೆಲ್ಲ ಹೀರಿ ಸೊದೆಗೆ ಕಾದೆನಿಂತೆ
ತುಳಿದವರನ್ನೆ ತಾಳಿಕೊಂಡು ಮಕ್ಕಳೆಂಬೆ ಶಾಂತೆ
ಅಮ್ಮ ಎಂದೆ ಹಂಬಲಿಸುವ ನಮಗೇನೆ ಚಿಂತೆ.
(ಹೇಳಿರಯ್ಯ ಹೇಳಿ ಜಯ)

ತಣಿವು ದಣಿವು ಇಲ್ಲದಂಥ ತಾಯಿ ಭಾರತಾಂಬೆ
ನಿನ್ನ ನೆನೆದು ಕುಣಿವೆನಮ್ಮ ಮಣಿದು ಶರಣೆಂಬೆ
ಏನು ಮಹಿಮೆ ಎಂಥ ಹಿರಿಮೆ ಎಂಥ ಕಣಸ ಕಾಂಬೆ
ಅಬ್ಬ ಅಬ್ಬ ಎಂದೆ ನಾನು ಇಂದು ಹಾಡಿಕೊಂಬೆ.
(ಹೇಳಿರಯ್ಯ ಹೇಳಿ ಜಯ)

ಏನೆ ಬರಲಿ ಏನೆ ಬರಲಿ ದೇವರ ಕರುಣೆ ಇರಲಿ
ಇಂದೋ ಮುಂದೋ ಎಂದೋ ಅಂತು ಮಂಗಳವ ತರಲಿ.
ಆಸೆ ಹಿಂಗಿ ಕೋಪ ಹೊಂಗಿ ನೇಹ ನುಂಗದಿರಲಿ
ಎಂಬ ನಿನ್ನ ಪ್ರೀತಿಮಾತು ಎಲ್ಲರೆದೆಗು ಬರಲಿ.
(ಹೇಳಿರಯ್ಯ ಹೇಳಿ ಜಯ)

ಬೆಂದ ಮನಕೆ ತಂಪನೆರೆವ ರಾಮಚಂದ್ರ ಶರಣು
ಬೃಂದಾವನದಿ ಸೊಗವ ತೋಡಿತಂದ ಕೃಷ್ಣ ಶರಣು
ಬಾನಿನಂತೆ ಹಿರಿಯ ಮನದ ಶಾಂತ ಬುದ್ಧ ಶರಣು
ಮೂವರಂಶ ಮೂಡಿದಂಥ ಬಾಪು ಗಾಂಧಿ ಶರಣು.
(ಹೇಳಿರಯ್ಯ ಹೇಳಿ ಜಯ)

ಮೂಡಣತ್ತ ದಿಟ್ಟಿಮಾಡಿ ಹೊಮ್ಮಿ ಹರಿದೆ ನೀನು
ಪಡುವಲಿಡೆಗೆ ಚಿತ್ತವಿಡದ ನಿನ್ನ ಹದನೇನು
ಅತ್ತಣಿಂದ ಕುತ್ತವೆಲ್ಲ ಬಂದು ನಿನ್ನ ಮುತ್ತಿತವ್ವ
ಬತ್ತಿಹೋದೆ ಇಂಥ ಪಾಡ ಎಂತು ಹಾಡಿಯೇನು—
(ಹೇಳಿರಯ್ಯ ಹೇಳಿ ಜಯ)

ಸುತ್ತ ಬಳಸುಕಡಲಿನಿಂದ ಎದ್ದ ಶೇಷನಂದ
ದೇವರಿಳಿಯೆ ಬಾಸಿಗಿಟ್ಟ ಕೋಡ ಮೆಟ್ಟಲಿನಂದ
ಗೌರಿಯು ವರಿಸಿ ಗಂಗೆಯು ಮೆರಸಿ ಶಿವನೆ ವಲಸೆನಿಂದ
ಮಂಜುವೆಟ್ಟೆ ಕಾವಲಿದ್ದರು ಬರುವವ ಬಂದೆ ಬಂದ.
(ಹೇಳಿರಯ್ಯ ಹೇಳಿ ಜಯ)

ಬೇನೆ ಇದ್ದರೆ ವಿಷದ ಪಾನ ಅಮೃತಪಾನದಂತೆ
ನಿನ್ನ ಹಗುರ ಕೆಟ್ಟಿತೇನೆ ಎಲೆ ಭಾಗ್ಯವಂತೆ
ಕೆಟ್ಟ ರಕುತ ಬಸಿಯು ಬಿಟ್ಟು ಶುದ್ಧಳಾಗೆ ಮುದ್ದ ಮೆದ್ದು
ಬಿದ್ದೆಯವ್ವ—ಎದ್ದೆಯೀಗ ಕಳೆಯೆ ಲೋಕಚಿಂತೆ.
(ಹೇಳಿರಯ್ಯ ಹೇಳಿ ಜಯ)

(ನಾಯಕ ಈಗ ಬಂದು ಹಾಡುತ್ತಾನೆ)

ಮರುಳು ಗರ್ವದಿಂದ ಕರುಳದೇವರಾಗಲಿಲ್ಲ
ಯಾವ ಪತಿತರೆತ್ತಿ ಬಂದ ಮರಳುಕಾಡಿನಲ್ಲ
ರುದ್ರಗಿಂತ ರುದ್ರನಾದ ಭದ್ರನಪ್ಪನೆಂತೊ ಕಾಣೆ
ನಿನ್ನ ಸ್ತನ್ಯವುಣಿಸು, ರಕ್ತ ದಾಹ ತಣಿಸುವುದಿಲ್ಲ.
(ಹೇಳಿರಯ್ಯ ಹೇಳಿ ಜಯ)

ಮೊಲೆ ಹಾಲನೆಲ್ಲ ಜನಕು ಕೊಟ್ಟು ಸಲಹು ತಾಯಿ
ಭೇದ ಬೇಡ, ಖೇದವಹುದು, ಭೇದ ದುಃಖದಾಯಿ
ಹೀನ ದೀನರೆನ್ನದೆಲ್ಲ ಹೃಷ್ಟಪುಷ್ಟರಾಗಿ ನಿನ್ನ
ಮಕ್ಕಳೆಂದೆ ಹಾಡಿ ಹರಸಿಕೊಳ್ಳುವಂತೆ ಕಾಯಿ.
(ಹೇಳಿರಯ್ಯ ಹೇಳಿ ಜಯ)

ಮೋದವೆಮ್ಮ ಹುರುಳೆಂಬ ಮಾತ ಶಿವ ತರಲಿ
ಭೇದವಿಲ್ಲ ಭ್ರಾತೃಗಳೆಂಬ ಮಾತನಲ್ಲ ತರಲಿ
ಕೃಪೆಯೇ ದೇವರ ಕಿರಣವೆಂದು ಕ್ರಿಸ್ತನ ತಂದೆ ಬರಲಿ
ಎಲ್ಲರ ದೇವರು ದೇವರಂತೆ ಬಂದು ಹದುಳ ತರಲಿ.
(ಹೇಳಿರಯ್ಯ ಹೇಳಿ ಜಯ)

ಒಬ್ಬ ಆಳು ಒಬ್ಬ ಅರಸು ಎಂದು ಬಾಳಲೇಕೆ
ಸಾರ್ವಭೌಮನೊಬ್ಬನೆಂದೆ ಎಲ್ಲ ತಿಳಿಯಿರೇಕೆ
ತುಳಿವರನ್ನು ತಾಳಿಕೊಂಬ ಬಾಳು ಹಾಳು ಸಾವೆ ಮೇಲು
ಎಂದು ಬದುಕೆ ಕೆಚ್ಚಿದೆ ಬೇಕು, ಕೊಲ್ಲುವ ಶಸ್ತ್ರ ಬೇಕೆ.
(ಹೇಳಿರಯ್ಯ ಹೇಳಿ ಜಯ)

ಅಂತವಿಲ್ಲದನಂತನ ಕರುಣೆಗೆ ಎಲ್ಲೆ ಅಲ್ಲೆ ಇಲ್ಲೆ ?
ತನುವಿನಲ್ಲಿ ರಕ್ತದಂತದು ಹರಿಯುದ ತಾಣವಿಲ್ಲೆ
ಕಾಲ ದೇಶ ಶಕ್ತಿಪ್ರಾಣ ಜ್ಞಾನರೂಪವಾದ ಇದನು
ತಕ್ಕ ಭೋಗ ತ್ಯಾಗದಿಂದ ಬಳಸಿಕೊಳ್ಳಿರಿಲ್ಲೆ.
(ಹೇಳಿರಯ್ಯ ಹೇಳಿ ಜಯ)

(ಆಟ ನಿಂತಮೇಲೆ ನಾಯಕ ಈ ರೀತಿ ನೆರೆದವರನ್ನು ಸಂಬೋಧಿಸುತ್ತಾನೆ.)

ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂ ಗಮಯ
ಓಂ ಶಾಂತಿಃ ಶಾಂತಿಃ ಶಾಂತಿಃ.

ಇಂತೆಮ್ಮ ಪೂರ್ವಜರು ಮೊರೆಯಿಟ್ಟರಾ ಶಿವಕೆ
ಎಂದೆಮಗೆ ಸಲ್ಲುವುದೊ ಪೂರ್ಣತೆಯೊಳೀ ಎರಕೆ
ಓ ತಂದೆ ನಡಸೆಮ್ಮ ಸಟೆಯಿಂದ ದಿಟಕೆಂಬ
ಮೊರೆಯನಾಲಿಸಿದಂತೆ ಸೆರೆಗೊಯ್ದನೋ ಸಾಂಬ
ಭಾರತದ ದಿಟವರಿಯೆ ಸೆರೆಯಲ್ಲವೇ ತಾಣ
ಅಲ್ಲಿ ಹರಿವುದು ನಮಗೆ ಮುಕ್ತರೆಂಬಜ್ಞಾನ

ಆದರಾ ಕತ್ತಲೊಳು ಬೆಳಕನೆರೆವುದೆ ಪ್ರೋಕ್ಕೆ
ಅದುವೆ ಫಲಿಸಿದೊಲಿಂದು ಶುಭದ ಕಣಸಿನ ಕಾಣ್ಕೆ
ಪರಂಚ್ಛಿ ಹೆಡಮುರಿಗೆ ಹಗ್ಗವನು ಕಡಿದಾಯ್ತು
ಎಡರ ಲೆಕ್ಕಿಸದೊಳಗು ನುಡಿದಂತೆ ನಡೆದಾಯ್ತು
ಇನ್ನು ಮುಂದೇನೆಂಬ ಪ್ರಶ್ನೆಗುತ್ತರವೇನು?
ಮೃತ್ಯುವಿಂದಮೃತಕ್ಕೆ—ನಡೆಯೆ ಬೆದರುವಿರೇನು?
ಅಮೃತಸ್ಯ ಪುತ್ರರೆಂದೆಮ್ಮ ಋಷಿ ಕರೆದನಲ
ಸಾವು ಜೀವನಗತಿಗೆ ಯತಿಲಯಸ್ಥಾನವಲ—
ಶಿವ ನಡಸುವೊಲೆ ನಡೆಯೆ ಅಮೃತ ದೊರೆವುದು ಸಿದ್ಧ
ಕಾಮ ಕೋಪವ ಬಿಟ್ಟು ಮರಳಿನಂದದಿ ಶುದ್ಧ
ಚಿತ್ತದೊಳಗಾತ್ಮವನು ನೆಲೆಗೊಳಿಸಿ ಬನ್ನಿರೈ.
ಸುತ್ತ ಸಿಡಿದರು ತಪ್ತಚಿತ್ತಾಗ್ನಿ ಎನ್ನಿರೈ
"ಮೃತ್ಯುವಿಂದಮೃತಕ್ಕೆ ಅಮೃತಪುತ್ರರ ನಡಸು
ನಮ್ಮನಂಜಿಸದಿರಲಿ ದುರ್ಗಪಥದೀ ಪೆಡಸು."
ನಿರ್ಮಲಾಂತಃಕರಣ ಸಿಡಿತಗಳ ತಡೆವುದೈ
ದ್ವಂದ್ವಗಳ ಬಿಟ್ಟಾತ್ಮ ಹದುಳವನೆ ಪಡುವುದೈ.
ಕೊಲುವೆನೆಂದೊಡೆ ಕೊಲ್ಲು ಎಂದೆ ನಾವೆನಬೇಕು.
ಕೂರಸಿಯು ಕೂರ್ಪಡಗೆ ಸವಿಸೊಲ್ಲ ತಡೆ ಸಾಕು
ಶುದ್ಧಸತ್ತ್ವರ ಸಾವು ಧರ್ಮವನು ಬೆಳಗುವುದು
ಹಿಂದೆ ನಮ್ಮಿಂದಾದ ಕರ್ಮಗಳ ತೊಳೆಯುವುದು
ಸತ್ತು ಮುಗಿಯದು ಬಾಳು ಎಂಬ ತತ್ತ್ವವ ನೆನೆದು
ನಿಶ್ಚಿಂತೆಯಿಂದಲೀ ನಂಜನುಣ್ಣುವ ನಲಿದು
ದ್ವೇಷರಾಗಗಳೆರಡು ಇರವಿನುತ್ಕಟ ರೂಪ
ಇವುಗಳಿಂದುದಿಸುವುದು ಮೋಹ ಇಲ್ಲವೆ ಕೋಪ
ಪ್ರೇಮ ನರ್ಮದ್ಯುತಿಯ ಬೆಳಗುವಗೆ ಇವು ಸಲ್ಲ.
ಕಾಳ್ಕಿಚ್ಚಿನುರಿಯೊಳಗೆ ದೀಪ ಕೌಶಲವಿಲ್ಲ.
ಭಾರತದ ಮಕ್ಕಳೇ ನಮ್ಮ ಬಾಳ್ ಕುಡಿಗಳನು
ನೇಹದೊಳಗದ್ದಿಯೇ ಬೆಳಗೋಣ ಶುಭಗಳನು.

(ಹಾಡುವನು)

ಅಂತವಿಲ್ಲದನಂತನ ಕರುಣೆಗೆ ಎಲ್ಲೆ ಅಲ್ಲೆ ಇಲ್ಲೆ
ಪಂಚರೂಪದೊಳಾ ಸಿರಿ ಹರಿವುದು ಎಲ್ಲರ ಹಂಚಿಕೆಯಲ್ಲೆ
ತಕ್ಕ ಪುಷ್ಟಿಯ ರಕ್ತದಿಂದ ಕೊಂಡು ಬಾಳುವ ಅಂಗಗಳಂತೆ
ಭೋಗ ತ್ಯಾಗದ ಮರ್ಮವರಿತು ಬಾಳೋಣೆಲ್ಲರು ಇಲ್ಲೆ.
(ಹೇಳಿರಯ್ಯ ಹೇಳಿ ಜಯ).

(ತೆರೆಯಲ್ಲಿ, ಅಲ್ಲಾಹೋ ಅಕ್ಬರ್, ಪಾಕಿಸ್ತಾನ್ ಜಿಂದಾಬಾದ್ ಎಂಬ ಘೋಷಣೆಗಳು ಕೇಳಿಬರುತ್ತವೆ.)

ಶಿವನತ್ತ ಚಿತ್ತಗೈದಲುಗದೆಯೆ ಕುಳ್ಳಿರಿ.
(ಹಸುರು ಬಾವುಟ ಹಿಡಿದುಕೊಂಡು ಮುಸಲ್ಮಾನರ ಪ್ರವೇಶ)

ರಹಿಮಾನ್ಖಾನ್

ಮೆರೆಯಲಿ ಶಾದ್ವಲ ವರ್ಣ ಪತಾಕೆ
ಇದನಿಳಿಕೈವರೆ ಜೋಕೆ —

ಬುಗ್ಗೆಯ ಸನಿಯದ ಹಸುರಿನ ನೆನಪಿನ
ತಣ್ಣಸಿರುಳಿನ ಚುಕ್ಕಿಯ ಚಂದ್ರನ
ಬಂಜೆನೆಲದ ಸುಡುಬಿಸಿಲನು ಮರೆಸುವ
ಮಂಗಳ ರೂಪದ ಕಂಗಳ ತಂಪಿನ
(ಮೆರೆಯಲಿ ಶಾದ್ವಲ ನೀಲ ಪತಾಕೆ)

ಪೈಗಂಬರ್ ಗುರು ಪೊರೆದ ಪತಾಕೆ
ಬಿದ್ದ ಅರೇಬಿಯವೆದ್ದ ಪತಾಕೆ
ಹಲದೇವರ ಪುಡಿಗೈದ ಪತಾಕೆ
ಜಗವನೆತ್ತೆ ಹೊಣೆಹೊತ್ತ ಪತಾಕೆ
(ಮೆರೆಯಲಿ ಶಾದ್ವಲ ನೀಲ ಪತಾಕೆ)

ಇದು ಮೆರೆವೆಡೆಯೇ ಪುಣ್ಯಸ್ಥಾನ
ಇದಕೆಡೆಗೊಡದೆಡೆ ಪಾಪಸ್ಥಾನ

ಇದ ನೆಲೆಗೊಳಿಸಲು ಕಟ್ಟುವೆವೀಗಳೆ
ಹಿಂದೂಸ್ಥಾನದಿ ಪಾಕಿಸ್ತಾನ
(ಮೆರೆಯಲಿ ಶಾದ್ವಲ ನೀಲ ಪತಾಕೆ)

ಅಲ್ಲಾಹೋ ಅಕ್ ಬರ್ ಎನ್ನದ
ಮಂದರ ತುಂಡರಿಸಲು ತುಸ ಹೇಸದ
ನಮ್ಮೆದೆ ಝಳಪಿನ ಹೊಳೆ ತಳವಾರದ
ಬೆಂಬಲದಲ್ಲಿಯೆ ನಡೆವ ಪತಾಕೆ
ಇದನಿಳಿಕೈವರೆ ಜೋಕೆ

(ಮೆರೆಯಲಿ ಶಾದ್ವಲ ನೀಲ ಪತಾಕೆ)
ಅಲ್ಲಾಹೋ ಅಕ್ ಬರ್!

ಜನನಾಯಕ

ಅಲ್ಲಾಹೋ ಅಕ್ ಬರ್ :
ವಂದೇ ಮಾತರಂ !

ರಹಿಮಾನ್‌ಖಾನ್

ಅಲ್ಲಾಹೋ ಅಕ್ ಬರ್
ಗುರು ಒಬ್ಬನೆ ಪೈಗಂಬರ್
ಒಂದೇ ಗ್ರಂಥ ಅದುವೆ ಕುರಾನ್
ಒಂದೇ ಗುರಿ ಪಾಕಿಸ್ತಾನ್.
ಅಲ್ಲಾಹೋ ಅಕ್ ಬರ್ ಎನ್ನುವರೇ
ವಂದೇಮಾತರವೆನ್ನುವರೆ?
ಛೀ ಛೀ ಬಾವುಟವಿಳಿಸಿರಿ ಜೋಕೆ
ಇಲ್ಲಿಹುದೊಂದೆ ಪತಾಕೆ.

(ಒಬ್ಬ ಮುಸ್ಲಿಮನು ತ್ರಿವರ್ಣಧ್ವಜವನ್ನು ಒಬ್ಬನ ಕೈಯಿಂದ ಕೊಸರಿಕೊಳ್ಳಲು ಪ್ರಯತ್ನಪಡುವಾಗ ನಾಯಕ ಆ ಧ್ವಜವನ್ನು ಅವನ ಕೈಯಿಂದ ತನ್ನ ಕೈಗೆ ತೆಗೆದುಕೊಂಡು ಹೀಗೆ ಹೇಳುತ್ತಾನೆ.)

ಜನನಾಯಕ

ಇದರೊಳೂ ಹಸುರಿಹುದು ಕಣ್ಣ ತಂಪು
ಸಿಮ್ಮಾಸೆ ಕನಸುಗಳ ಹೊಗರ ಪೆಂಪು
ಇದು ಬಿದ್ದರದು ಬಿದ್ದ ತೆರನೆ ಅಹುದು
ತುಸ ತಾಳ್ಮೆಯಿರೆ ಎರಡು ಮೆರೆಯಬಹುದು.

ರಹಿವರ್ಮಾಖಾ

ತಮ್ಮ ಬೇಟೆಗೆ ತಕ್ಕ ಬಣ್ಣವನೆ ಕೊಳುವ
ದುಷ್ಟಮೃಗದಂತಿರುವ ಇದರ ತರತರವ
ಏನು ಬಣ್ಣಿಸಲಯ್ಯ ಇದು ಕಣ್ಣ ಬೇನೆ
ಇಳಿಸಿರಿದ ಇಲ್ಲದೊಡೆ ಏನಹುದೊ ಕಾಣೆ.

ಜನನಾಯಕ

ಭಾರತದ ಕನಸೆಲ್ಲ ನನಸಾಗಿ ತೋರೆ
ಇದು ಮೆರೆದ ಹೊರತಿಲ್ಲ ದಾರಿ ಬೇರೆ
ಇದರಿಂದ ನೂರಾರು ಧ್ವಜ ಹಿರಿಯಬಹುದು
ಆದೊಡೆಲ್ಲಕು ಇದುವೆ ಜನನಿಯಹುದು.

ರಹಿವರ್ಮಾಖಾ

ಒಂದು ಕಣ್ಣಿಗೆ ಹಾಲು ಸುಣ್ಣವಿನ್ನೊಂದಕ್ಕೆ
ನೀವರಸು ನಾವಾಳು, ನೀವಿಡುವ ಹಿಡಿಬಿಕ್ಕೆ
ನಮ್ಮ ಬದುಕಿನ ಕೂಳು-ಇದಕು ಮರಣವೆ ಮೇಲು-
ಏಕೆ ಸಾವಿನ ಚಿಂತೆ ಹೊಳೆಯುತಿರೆ ಈ ಬಾಳು.

ಜನನಾಯಕ

ಎಷ್ಟು ಕಡಿವೆಯೊ ತಮ್ಮ, ಕಡಿದು ಮುಗಿಸುವುದೇ
ರಕ್ತಕಾಲುವೆ ಹರಿಯೆ ಆಸೆ ಹುಲುಸುವುದೇ

ರಹಿವರ್ಮಾಖಾ

ತಡೆದವರು ಮಡಿಯಬೇಕೆಂದೆಮ್ಮ ನಿಯಮ
ತಡೆಯಿರುವ ತನಕವೂ ನಾವು ಕಡಿವುದೆ ಸಮ.

ಜನನಾಯಕ

ಹರಿಯಿಚ್ಛೆ ಇಂತಿದ್ದೊಡದುವೆ ಸಲಲಿ
ಅದನು ನಾ ತಡೆವೆನೇ—ಅದುವೆ ಗೆಲಲಿ.

ರಹಿಮ್‌ಖಾನ್

ಮಾತುಮಾತಿಗು ದೇವರೆಂದೇಕೆ ಉದ್ಗಾರ
ಅವರೆ ಸೋತರು ನಿಮ್ಮದೇನೆಂಬ ಠೇಂಕಾರ!
ಕಿತ್ತೆಸೆಯಿರಾ ಧ್ವಜವ ನುಚ್ಚುನುರಿಮಾಡಿ
ನಮ್ಮೆದೆಯು ಕಿಚ್ಚಿಲ್ಲ ನಂದೆ ತುಳಿದಾಡಿ.

ಜನನಾಯಕ

ಹೇಳಿರಯ್ಯ ಹೇಳಿ ಜಯ ಭಾರತಮಾತೆ
ಜಯ ದುಃಖ ಪೂತೆ
ಜಯ ನಿರ್ಭೀತೇ
ವಿಖ್ಯಾತೇೕೕ
ನೆನೆವ ಮನಕೆ ತಂಪನೆರೆವ ರಾಮಚಂದ್ರ ಶರಣು
ಬೃಂದಾವನದಿ ಸೊಗವ ತೋಡಿ ತಂದ ಕೃಷ್ಣ ಶರಣು
ಬಾನಿನಂತೆ ಹಿರಿಯ ಮನದ ಶಾಂತ ಬುದ್ಧ ಶರಣು
ಮೂವರಂಶ ಮೂಡಿವಂಥ ಬಾಪು ಗಾಂಧಿ ಶರಣು.

(ಹೇಳಿರಯ್ಯ ಹೇಳಿ ಜಯ)

(ಕಲಕಲ ಕೋಲಾಹಲ. ಆಗ ವಿಕಟಕವಿಯ ಪ್ರವೇಶ. ಅರಮನೆಯ ಅಧಿಕಾರಿ ಜತೆಗಿರುವನು.)

ವಿಕಟಕವಿ

ಹೋ ಹೋ ತಾಳಿರಯ್ಯ ತಾಳಿರಯ್ಯ
ಸುನೋ ಸುನೋ ಭಯ್ಯಾ
ಇದು ಹಿಂದೂಸ್ಥಾನವು ಅಲ್ಲ
ಪಾಕಿಸ್ತಾನವು ಅಲ್ಲ
ರಾಜಸ್ಥಾನ

ಬಂದೂಕಿನ ದಳ ಬರುತಿದೆ

ಜೋಪಾನ.

(ಗುಂಪಿನ ಹೊರವಲಯದ ಚಪಲರು ಚೆದರುವರು. ತಿರುಳು ಉಳಿಯುತ್ತಾರೆ.)

ಏನಿದು ರಹಿಮ್ರ್ಖಾ
ನಿನಗಿಲ್ಲವೆ ಖಾದಾ
ನಮಸ್ತೇ ನಾಯಕರೇ
ನಿಮಗಿದೊ ನಮ್ಮೊಡೆಯರ ಕರೆ.

(ಕಾಗದವೊಂದನ್ನು ಕೊಡುವನು)

ಈಗಲೆ ಈಗಲೆ ಬಿಜಯಂಗೈಯಿರಿ ಅರಮನೆಗೆ
ಸೆರೆಮನೆಯಿಂದರಮನೆಗೆ
ಅರಮನೆಯಿಂವರಮನೆಗೆ
ಬೆಳೆಯಲಿ ನಿಮ್ಮೊಸಗೆ.

ಜನನಾಯಕ

ಹರಿಚಿತ್ತದ ತೆರನಾಗಲಿ
ಇಕೊ ನಾ ಸಿದ್ಧ—

ಎಲ್ಲರೂ

ನಮಸ್ತೇ, ನಮಸ್ತೇ, ನಮಸ್ತೇ.

ಜನನಾಯಕ

ಸ್ವಸ್ತಿ ತೇ, ಸ್ವಸ್ತಿ ತೇ, ಸ್ವಸ್ತಿ ತೇ
ಸಲಾಂ ಸಾಹೇಬ್ ಸಲಾಂ.

ರಹಿಮ್ರ್ಖಾ

ಸಲಾಂ

ಜನನಾಯಕ

(ಎಲ್ಲಂಗೂ)

ಉದ್ವೇಗಕೆಡೆಗೊಡದೆ ಶಾಂತಿಯನು ಪಾಲಿಸಿ.

(ಕೆಲವು ಅನುಯಾಯಿಗಳೊಡನೆ ಅರಮನೆಯ ಅಧಿಕಾರಿಗಳ ಜೊತೆಗೆ ಹೊರಡುವನು.)

ರಹಿಮ್‌ಖಾ

ನಮ್ಮ ಮೊದಲಿಗರ ದೊರೆ ಕರೆದಿಹರೋ
ಇಲ್ಲ ಗರ್ವದೊಳು ಮರೆತಿಹರೋ.

ವಿಕಟಕವಿ

ಕರೆದಿಹರಯ್ಯ, ಕರೆಯದೆ ಎಂತು
ನಿಮ್ಮ ಘೋಷಣೆಗು ಗೌರವ ಬಂತು
ಬುಟ್ಟಿಗೆ ಸೇರಲಿ ಬುಸುನಾಗಪ್ಪ
ಬಾವುಟವಿಳಿಸಿರಿ ಇನ್ನೇಕಪ್ಪ—
ನೆರೆದಿಹುದತ್ತಡೆ ಹಿರಿಪರಿಷತ್ತು
ಎಲ್ಲರು ನೆರೆವುದೆ ಅವರ ಷರತ್ತು
ಇಲ್ಲೂ ನಡೆಯಲಿ ನಮ್ಮಯ ಪರಿಸೆ
ತೋರಿರಿ ಮಲ್ಲರ ಮಾತಿನ ವರಸೆ.

ರಹಿಮ್‌ಖಾ

ಮಾತು ಮಾತು ಬರಿ ಬರಿ ಮಾತು
ಅರ್ಥವೆ ಸೋರುತ ಹೋಗುವ ತೂತು.

ವಿಕಟಕವಿ

ಈ ಸೆಕೆಯೊಳಗೀ ತುಂತುರೆ ಚೆಂದ
ಭಾಯ್ ರಹಿಮ್‌ಖಾ, ಅಲ್ಲನ ಕಂದ
ಗುರುಗುರುಗುಟ್ಟುವರೇಕೀ ಜನಕೆ
ಅರ್ಥವೆ ಆಗದೆ ಈ ನಡೆವಳಿಕೆ.

ರಹಿಮ್‌ಖಾ

ಗುರುಗುಟ್ಟುವುದೇ ನಮ್ಮಭ್ಯಾಸ
ಆ ಕುರಿವೇಷಕೆ ಈ ಹುಲಿವೇಷ

**ಕಾಂಗ್ರೆಸ್ ಯುವಕ**

ಒಪ್ಪಿದೆ, ಇಬ್ಬರದೂ ಬರಿವೇಷ
ಅದ ಕಿತ್ತೊಗೆಯಲು ಇದೆ ಅವಕಾಶ.

**ವಿಕಟಕವಿ**

ಈ ಕಿತ್ತಾಟದೊಳಂಗವೆ ಊನ
ಪ್ರಾಣವೆ ಹೋದರು ಉಳಿಯದು ಮಾನ.

**ಕಾಂಗ್ರೆಸ್ ಯುವಕ**

ನಮ್ಮಾಳುವರಿಗೆ ಇದೆ ಸುಮ್ಮಾನ.

**ರಹಿಮಾಖಾನ**

ನಿಮಗೇಕೀ ಆಳುವ ದುಮ್ಮಾನ?

**ಕಾಂಗ್ರೆಸ್ ಯುವಕ**

ಆಳುವೆವಿದ್ದರೆ ಆಳುವ ತ್ರಾಣ.

**ರಹಿಮಾಖಾನ**

ನಮ್ಮೆದಿರಿಸುವೊಡೆ ನೀ ನಿತ್ರಾಣ.

**ವಿಕಟಕವಿ**

ಅದಕೇ ಅಲ್ಲವೆ ಈ ಸಂಧಾನ!

**ರಹಿಮಾಖಾನ**

ಒಪ್ಪಿದರಲ್ಲವೆ ಪಾಕಿಸ್ತಾನ?

**ವಿಕಟಕವಿ**

ಅಲ್ಲಾದೊಡೆ ಆ ಅಲ್ಲಾ ರಾಜ್ಯ
ನಿನ್ನನ್ನಕೆ ಇಲ್ಲಹುದೇ ಆಜ್ಯ?

**ರಹಿಮಾಖಾನ**

ಹೊಟ್ಟೆ ತುಂಬಿರೆ ಕೈಕಾಲಿಗು ಬಲ
ಅಲ್ಲವರೆದ್ದಿರೆ ಇಲ್ಲೆಮ್ಮ ಛಲ.

**ಕಾಂಗ್ರೆಸ್ ಯುವಕ**

ಛಲಬಲವೆಂದರೆ ಮನೆಮನೆಯೇ ಕಳ
ಆಳುವ ಬದಲಳುವುದೆ ಇದರ ಫಲ.

**ರಹಿಮ್ಖಾನ್**

ನೀವತ್ತರೆ ನಕ್ಕಂತೆಯೆ ನಾವು.

**ಕಾಂಗ್ರೆಸ್ ಯುವಕ**

ದಿಟ, ನಡೆಕಾಲಿಗೆ ನೀವೇ ಜೋವು.

**ರಹಿಮ್ಖಾನ್**

ಬರಿ ಜೋವಲ್ಲ, ಪಾರ್ಶ್ವದ ವಾಯು!
ಅದರ ಇಲಾಜೊಳೆ ಕಳೆವುದು ಆಯು.

**ವಿಕಟಕವಿ**

ರೋಗ, ದುಷ್ಟವ್ಯಾಗ—ಇಂತೇಕೆ
ಸಖ ರಹಿಮ್ಖಾನ್, ನಿನ್ನಯ ಬಯಕೆ?

**ರಹಿಮ್ಖಾನ್**

ನಮ್ಮ ಜನ ಮಿತ—ಇವರೋ ಅಮಿತ
ಈ ಕಾಡುವಿಕೆಯೊಳೇ ನಮ್ಮ ಹಿತ.

**ಕಾಂಗ್ರೆಸ್ ಯುವಕ**

ನಾವಿದಕೆಲ್ಲಕು ಬಲ್ಲೆವು ಮದ್ದು
ಅದಕೇ ಸ್ವೈರಣೆಯೇ ಸರಹದ್ದು.

**ರಹಿಮ್ಖಾನ್**

ನೀವರಿತಿರುವುದು ಸ್ವೈರಣೆಯೊಂದೇ.

**ವಿಕಟಕವಿ**

ಯುಗಯುಗದವಶೇಷಂಗಳ ಹೊತ್ತು
ದಿಟ, ಕುಗ್ಗಿದೆ ಈ ಮಂದಿಯ ಕತ್ತು.

ಕಾಂಗ್ರೆಸ್ ಯುವಕ

ಮತ್ತಾರಿಗೊ ಸಖ, ಈ ತಾಕತ್ತು?

ರಹಿಮ್‌ಖಾ

ಈ ತಾಕತ್ತೇ ನಮ್ಮಾಪತ್ತು.

ವಿಕಟಕವಿ

ಇವರ ಹೊರೆಯೊ—ನಿಮ್ಮದಕೂ ಭಾರ.

ಕಾಂಗ್ರೆಸ್ ಯುವಕ

ಅದಕೋ ಇವರೀ ಹಾಹಾಕಾರ?

ವಿಕಟಕವಿ

ಈ ನಾಡಿನ ದೇವರ ಹೊರೆ ಜೊತೆಗೆ
ಕಾಬಾ ದೇವರ ಹೊರೆಯಾಯ್ತಿವಗೆ.

ರಹಿಮ್‌ಖಾ

ಏನಿರೊ, ತಿಳಿವೇ ಇಲ್ಲವೆ ನಿಮಗೆ
ಅಲ್ಲಾ ಒಬ್ಬನೆ ದೇವರು ನಮಗೆ.

ವಿಕಟಕವಿ

ನಿಟ್ಟೇತಕೆ ರಹಿಮ್‌ಖಾ ದಿಟಕೆ
ದೈವ ಪ್ರೇರಿತವೀ ಚಟುವಟಿಕೆ.
ನಿಮ್ಮಜ್ಜನೊ ಮುತ್ತಜ್ಜನೊ ಹೋದ
ಕೀರ್ತಿಯ ನಾರಾಯಣನೇ ಆದ.

ರಹಿಮ್‌ಖಾ

ಹ್ಞ!

ವಿಕಟಕವಿ

ನೀನರಿತಿಲ್ಲವೆ ಆ ತಲಕಾಡ
ಮರಳು ಕವಿಯಿತಾ ದೇವರ ಬೀಡ.

ಆದರಂತೆಯೆ ನಿನ್ನಿರವನು ತೋಡೆ
ತೋರುವುದೆಮ್ಮೆಯ ದೇವರ ಮೂಡೆ.

**ರಹಿಮಾನ್ ಖಾನ್**

ನೋಡಿದರೂ ಇಲ್ಲ
ತೋಡಿದರೂ ಇಲ್ಲ
ಎಲ್ಲ ದೇವರೂ ಇದರೊಳು ಜೀರ್ಣ.

**ಕಾಂಗ್ರೆಸ್ ಯುವಕ**

ನಮ್ಮ ಶಿವ ಮಾತ್ರ ಅಲ್ಲಿ ಅಜೀರ್ಣ.

**ವಿಕಟಕವಿ**

ದಿಟ, ದಿಟ
ಮೆಕ್ಕಾ ಅಂದರೆ ಶಿವ ನಕ್ಕ.

**ರಹಿಮಾನ್ ಖಾನ್**

ನಕ್ಕರೆ ಮುರಿವೆವು ಸೊಕ್ಕ.

**ವಿಕಟಕವಿ**

ಅಯ್ಯೋ ಶಿವನೆ, ಇಷ್ಟಕೆ ಮುನಿಸೆ ?
ಅಲ್ಲೂ ಅವನೇ ಇಲ್ಲೂ ಅವನೆ
ಎಲ್ಲಿ ಶಿವ ನಮ್ಮಧೀನ
ಅಲ್ಲೆ ಮದೀನ.

**ಕಾಂಗ್ರೆಸ್ ಯುವಕ**

ಅಹುದಹುದು—
ರಾಮ ರಹೀಮ
ಕೃಷ್ಣ ಕರೀಮ
ಇಲ್ಲವ ಬಿದ್ದ
ಅಲ್ಲವನೆದ್ದ.

**ವಿಕಟಕವಿ**

ಹಾಗಲ್ಲಪ್ಪ—ಅಲ್ಲವನೆದ್ದ
ಇಲ್ಲಿವ ಬಿದ್ದ.

**ಕಾಂಗ್ರೆಸ್ ಯುವಕ**

ಹೇಗಾದರು ಸರಿ—
ಬಿದ್ದವನೇಳಲೆಬೇಕು
ಎದ್ದವ ಬೀಳಲೆಬೇಕು
ಇದುವೇ ಕರ್ಮದ ಮರ್ಮ
ಇದೆ ಈ ನಾಡಿನ ಧರ್ಮ.

**ರಹಿಮ್‌ಖಾನ್**

ನಿಮ್ಮದೆಲ್ಲ ಬರಿಸುಳ್ಳಿನ ಕಂತೆ
ಕರ್ಮ ಧರ್ಮ ಎನ್ನಲು ಬಂತೆ ?
ಅಲ್ಲನ ದಯವಿದ್ದವನೆದ್ದ
ಇಲ್ಲದವನು ಬಿದ್ದ.
ಅಲ್ಲಾಹೋ ಅಕ್‌ಬರ್!

**ಕಾಂಗ್ರೆಸ್ ಯುವಕ**

ವಂದೇ ಮಾತರಂ !

**ವಿಕಟಕವಿ**

(ಕೇಳಿ ನಗುತ್ತಾ)

ಅವರವರೆಂಜಲೆ ಅವರವರಿಗೆ ಹಿತ !

**ಕಾಂಗ್ರೆಸ್ ಯುವಕ**

ಮಿಕ್ಕರಿಗಸಹ್ಯ—ಇದೆ ನಮ್ಮ ಮತ !
ಹೆಚ್ಚಳಿಕೆಯ ಬಲದಿಂದಲಿ ಮೆರಸೆ
ಮಧ್ಯಯುಗದ " ಸರ್ " ದಾರರ ವಂಸೆ
ಸಲ್ಲದೀಗ—ನ್ಯಾಯದ ಕಾಲವಿದು.
ನಗುವರೆಲ್ಲ ಕ್ವಿಕ್ಸೋಟನ ನೆನೆದು

ನಮ್ಮದೆ ಹೆಚ್ಚೆಂದೀಟಿಯಾಡಿಸೆ
ಮತವೆನ್ನುತ ನೆರೆಹೊರೆಯನು ಪೀಡಿಸೆ.

ರಹಿಮ್ಖಾ

ನಿಮ್ಮ ಜನಕಿರಲಿ ಈ ಉಪದೇಶ
ನಮಗೂ ಇಲ್ಲಿರಬೇಕವಕಾಶ
ನಮ್ಮುಳಿಕೆಗಾಗಿ ನಮ್ಮೀ ಜಗಳ
ನೀವೇ ಬಿತ್ತಿದಿರೆಮಗೀ ದಿಗಿಲ
ಅಲ್ಲಾ ಒಬ್ಬನೆ ದೇವರು ನಮಗೆ
ಅವನ ಹೊರತು ಎಲ್ಲವು ಹೊರತೆಮಗೆ.

ವಿಕಟಕವಿ

ಅಹುದೈ—ಒಪ್ಪಿದೆ—ರಹಿಮ್ಖಾ
ಅಲ್ಲಾ ಒಬ್ಬನೆ ಈ ಜಗಕೆಲ್ಲ
ಅವನ ಹೊರತು ಮತ್ತಾರೂ ಇಲ್ಲ
ಈ ಜಗವೆಲ್ಲಾ ಅಲ್ಲನ ಆಟ
ಈ ತಿರೆಯೆಲ್ಲಾ ಅಲ್ಲನ ತೋಟ
ಕಾಬೂಲಿನ ದಾಳಿಂಬೆಯ ಹಣ್ಣು
ನಮ್ಮೀ ನಾಡಿನ ಮಾವಿನ ಹಣ್ಣು
ಆವುದು ಬೇಕು ಆವುದು ಬೇಡ
ಈ ತೆರ ಅಲ್ಲನ ದಯೆ ಬಹು ಗಾಢ
ಆ ಖರ್ಜೂರ ಈ ಅಂಜೂರ
ರುಚಿಬಲ್ಲಗಿಲ್ಲ ಹತ್ತಿರ ದೂರ
ಹದಗೊಳಿಸಯ್ಯಾ ಮನದ ನಾಲಗೆ
ಒಟ್ಟೆಕೊಳ್ಳದಿರು ಒಂದೇ ಮೇವಿಗೆ
ಸಖ, ರಹಿಮ್ಖಾ, ನಾಡಿನ ಮಗನಾಗು
ಅನ್ಯರನಾರ್ಯ ಕ್ರೌರ್ಯವ ನೀಗು
ಶಾಂತಿಯಲ್ಲವೇ ಇಸ್ಲಾಮಿನ ಬಗೆ

ನಿಮಗೇಕಯ್ಯ ಹರಿಶಿವರ ಹಗೆ?
ಈ ನೆಲದೊಳು ರುದ್ರನು ಶಿವನಾದ
ನಿಮ್ಮಲ್ಲಗು ಇಲ್ಲಾಗಲಿ ಮೋದ
ಕಾವೇರಿಯ ಪುಳಿನಸ್ಥಳದಂದ
ನೀ ಹಿತಮಿತದೊಳು ಶೋಭಿಸೆ ಚೆಂದ
ನಿನ್ನದೊಂದನೂ ತೊರೆಯಲು ಬೇಡ
ಮನದಿಂದಸಹಿಷ್ಣುತೆ ಹೊರಮೂಡ
ಸಖ, ರಹಿಮ್‌ಖಾನ್, ನನ್ನಂತಾಗು
ಅಲ್ಲನಿಲ್ಲದಿರವಿಲ್ಲವೆನ್ನುತ
ಎಲ್ಲರೊಳೂ ನೀನಲ್ಲನ ಕಾಣುತ
ನಮ್ರನಾಗು, ನಾಡಿಗೆ ಲೇಸಾಗು.

ರಹಿಮ್‌ಖಾನ್

ಉಪನ್ಯಾಸ ಮುಗಿಯಿತೋ?

ಕಾಂಗ್ರೆಸ್ ಯುವಕ

ಈತನಿಗೋ ಇದು ನನಗೋ?

ವಿಕಟಕವಿ

ನನಗೆ ಅಪ್ಪ ನನಗೆ!

ಕಾಂಗ್ರೆಸ್ ಯುವಕ

ಹೊರಡೋಣವೊ ಮನೆಗೆ?

ರಹಿಮ್‌ಖಾನ್

ಮನೆಗೇತಕೆ? ಬೀದಿಗೆ
ಜನ ಬೆಚ್ಚಲಿ ಕೂಗಿಗೆ
ಅಲ್ಲಾಹೋ ಅಕ್‌ಬರ್!

ಮುಸ್ಲಿಂ ಜನ

ಅಲ್ಲಾಹೋ ಅಕ್‌ಬರ್!

ಕಾಂಗ್ರೆಸ್ ಯುವಕರು

ವಂದೇ ಮಾತರಂ!

(ಈ ಘೋಷಣೆಗಳ ತುಮುಲವು ಒಳ್ಳೆಯ ಹುರುಪಿನಿಂದ ನಗೆ ಬೆರೆದು ನಡೆಯುವುದು.)

ವಿಕಟಕವಿ

ಕೂಗಿ ಕೂಗಿ ಶಹಬಾಸ
ಬೊಬ್ಬೆಯಿಡಿರಿ ಸಂತೋಷ
ಈ "ನವಿಲುನೂತ್ತ್ರಾಂಡಿರ"*
ನುಡಿಯ ಮಟ್ಟಕಿರಲಿ ಚಿರ
ಆಗದಂತೆ ಬಿಸಿ ಬವರ
ಶಾಂತರ ಶ್ರೀವೈಷ್ಣವರ
ಗುಡಿಯ ಶಾತ್ತುಮೊರೆಯ ತೆರ—
ಅಲ್ಲಾಹೋ ಅಕ್‌ಬರ್
ವಂದೇ ಮಾತರಂ!

(ತೆರೆಯಲ್ಲಿ, ಪೋಲೀಸ್ ಪೊಲೀಸ್ ಎಂಬ ಕೂಗು. ಮಂದಿ ಚೆದರುತ್ತದೆ. ತೆರೆ ಬಿದ್ದು ಏಳುತ್ತದೆ.)

(ಪೋಲೀಸಿನವರ ಜತೆಗೊಂಡು, ಐ.ಜಿ.ಪಿ., ಪ್ರಚಾರಣ ಮಂತ್ರಿ, ದಳಪತಿ, ಕವಿ, ಗಮಕಿ, ವಾದಿ, ವಾಗಿ, ಇವರು ಪ್ರವೇಶಿಸುತ್ತಾರೆ.)

ಐ.ಜಿ.ಪಿ.

(ಚೆದರುತ್ತಿರುವ ಗುಂಪನ್ನು ಉದ್ದೇಶಿಸಿ)
ಓಡದಿರಿ, ಓಡದಿರಿ

---

* ಶ್ರೀ ವೈಷ್ಣವರ ದೇವಸ್ಥಾನಗಳಲ್ಲಿ ಪೂಜೆಯ ಕೊನೆಯಲ್ಲಿ ನಡೆಯುವ ತೆಂಗಲೆವಡಗಲೆ ಮಂಗಳಾಶಾಸನಗಳ ಮೃದು ಸ್ಪರ್ಧೆ.

ನಮ್ಮ ನೋಡಿ ಓಡದಿರಿ
ಕೂಗಿ ಕೂಗಿ ಸಂತೋಷ
ಕೂಗಿನೊಳೇನಿದೆ ದೋಷ
ನಮಗಿಲ್ಲವು ಪಕ್ಷಪಾತ
ಆಗದಿರಲಿ ರಕ್ತಪಾತ
ಅಷ್ಟೆ ನಮ್ಮ ಹಾರೈಕೆ
ಆದೊಡೆ ಜೋಕೆ ಜೋಕೆ!

ಪ್ರಚಾರಣ ಮಂತ್ರಿ

ಹಿಂದು ಮುಸ್ಲಿಮರೊಂದೆಮಗೆ
ಈ ಭೇದವೆ ನಮ್ಮ ಹಗೆ
ಓ ಕವಿ ಗಮಕಿ ವಾದಿ,
ನಿಮ್ಮ ಕಲೆಗೆ ಇದೆ ಹಾದಿ.
ಅಣ್ಣಾದಿರೇ ಲಾಲಿಸಿರೈ
ಈ ನೀತಿಯ ಪಾಲಿಸಿರೈ.

ವಾದಿ

ಖಾಮೋಷ್ ಖಾಮೋಷ್!

**(ವಿಕಟಕವಿ ಹೊರತು ಮಿಕ್ಕವರೆಲ್ಲ ಚೆದರಿಹೋಗಿದಾರೆ. ಆದರೆ ಕವಿ ದಿಣ್ಣೆಯೇರಿ ಗಂಟಲು ಸರಿಮಾಡಿಕೊಂಡು ತನ್ನ ಕವನವನ್ನು ಪತ್ರಮುಖೇನ ಓದುತ್ತಾನೆ.)**

ಕವಿ

"ಹಿಂದೂ ಮುಸ್ಲಿಮರೊಂದೇ
ಎಂಬೀ ನಾಡಿಗೆ ಕುಂದೇ"
ಗಮಕಿಗಳೇ ನೆರವಾಗುವಿರಾ?
**(ಎಂದು ಪತ್ರವನ್ನು ಆತನ ಕೈಯಲ್ಲಿ ಕೊಡುತ್ತಾನೆ.)**

**ಗಮಕಿ**

**(ಕಣ್ಣು ಮುಚ್ಚಿಕೊಂಡು ಕಿವಿಗೆ ಕೈಯಿಟ್ಟು ಹಾಡುತ್ತಾನೆ.)**

ಹಿಂದೂ ಮುಸ್ಲಿಮರೆಂದರೆ ತೊಂದರೆ
ಹದುಳ ಒಡಹುಟ್ಟುಗಳಂದೆ ನಾವಿರೆ
ನಾಡಿನ ಹಿತವೀ ನಂಟೊಳೆ ನಿಂತಿರೆ
ನಾ ನೀ ಎನೆ ಹೊಡೆದಾಡುವರೇ.
ಹಿಂದೂ ಮುಸ್ಲಿಮರೊಂದೇ....

**ವಿಕಟಕವಿ**

ಓ ಓ ಕಿವಿಯೇ ಇಲ್ಲ ಬಾಯೇ ಎಲ್ಲ—
ಅಂದರೆ, ಹೇಳುವರುಂಟು ಕೇಳುವರಿಲ್ಲ.
ಆದೊಡೆ ಗಮಕಿ, "ಗಳಂದೆ" ಅಲ್ಲ—
"ಹದುಳ ಒಡಹುಟ್ಟುಗಳೆಂದೆ ನಾವಿರೆ"!
ಭಾವಕಿಂತಲೂ ಗಮಕ ಹೆಚ್ಚಿದರೆ
ಹೋರಿಗಿಂತ ಮಿಗಿಲಪ್ಪುದು ಹೊರೆ.
ಆದರೆ
ಗಳಂದೆಗಿಂತ ಕೊಳಂದೆ ಚೆನ್ನು
ಗಮಕೀ, ಇದನೀ ರೀತಿಯೊಳೆನ್ನು:
"ಹಿಂದೂ ಮುಸ್ಲಿಮರೆಂದರೆ ತೊಂದರೆ
ಈ ನೆಲಕೆಲ್ಲರು ಕೊಳಂದೆಯಂತಿರೆ
ನಾಡಿನ ಹಿತವೀ ನಂಟೊಳೆ ನಿಂತಿರೆ
ನಾ ನೀ ಎನುತಿರಿದಾಡುವರೇ
ಹಿಂದೂ ಮುಸ್ಲಿಮರೊಂದೇ...."

**ಕವಿ, ಗಮಕಿ, ವಾದಿ, ವಾಗ್ಮಿ**

ಓ ನೀನೇ ವಿಕಟ?
ನಮಸ್ಕಾರ ನಮಸ್ಕಾರ.

**ವಿಕಟಕವಿ**

ನಮಸ್ಕಾರ ನಮಸ್ಕಾರ
ಎಲ್ಲರಿಗೂ ನಮಸ್ಕಾರ.

(ಅಧಿಕಾರಿಗಳು ಪ್ರತಿ ನಮಸ್ಕಾರಮಾಡುವರು.)

**ವಾದಿ**

(ಪ್ರಚಾರಣ ಮಂತ್ರಿಗೆ)

ಅಪ್ಪಣೆ ದಯಪಾಲಿಸಿ ಮಂತ್ರಿವರ
ಸರ್ಕ್ಕಾರಕೇಕೆ ಈ ಜನದಾಸರ
ಗುಂಪು ನೆರೆವೆಡೆಗೆ ನಾವೇ ಹೋಗಿ
ಪ್ರಚಾರಿಸುವೆವೈ ಇದ ಲೇಸಾಗಿ.

**ಪ್ರಚಾರಣ ಮಂತ್ರಿ**

ಅಂತೆ ಗೈಯಿರಿ, ಪೋಲೀಸರ ಪಡೆ
ಕಾಕಿಯ ತೊರೆದು ಇರಲಿ ಬೆಂಗಡೆ.

(ಮಿತ್ರಚತುಷ್ಟಯದೊಡನೆ ವಿಕಟಕವಿಯೂ ಹೊರಡುತ್ತಾನೆ.)

**ದಳಪತಿ**

ವಿಕಟ, ನೀನೆಲ್ಲಿಗೆ ಹೊರಟಿರುವೆ ?

**ವಿಕಟಕವಿ**

ನಮಸ್ಕಾರ ದಳಪತಿಗಳೆ,
ನಾ ನಿಮ್ಮೊಡನಿರುವುದು ತರವೆ ?
ಅಧಿ ಅಧಿಕಾರಿಗಳೆಲ್ಲಿ
ಈ ಬಡ ಬಿನದಿಗನೆಲ್ಲಿ?
ಬಯಲ ತಾಪಕೂ ಮಲೆಯ ತಂಪಿಗೂ
ಇರುವಷ್ಟಂತರ ನಮಗೂ ನಿಮಗೂ.

**ಐ. ಜಿ. ಪಿ.**

ಅಹುದಯ್ಯಾ ಅಹುದಯ್ಯಾ ವಿಕಟ
ನಮ್ಮ ಮುಖದೊಳೇ ಈ ದಿಟ ಪ್ರಕಟ.

ದಳಪತಿ

(ನಗುತ್ತಾ)

ದಿಟ, ಐ. ಜಿ. ಪಿ., ಕಂಗೆಟ್ಟಿಹಿರಿ
ನೀವೊಬ್ಬರೆ ಕಷ್ಟಕೆ ಸಿಕ್ಕಿದಿರಿ
ಆದರೆ,
ನಾಲ್ಕು ದಿನವಿರಲಿಲ್ಲ ನೀಲಗಿರಿಯೊಳು
ನಮ್ಮನು ಕೆಳಗಿಳಿಸಿತು ಈ ಹುಯಿಲು.

(ಕೆಲವರು ಪೋಲೀಸಿನವರು ಕುರ್ಚಿಗಳನ್ನೂ ಮೇಜನ್ನೂ ತಂದು ಹಾಕುವರು. ತಂಪಿನ ಪಾನೀಯಗಳೂ ಸಿದ್ಧವಾಗುತ್ತವೆ. ಎಲ್ಲರೂ ಕುಳಿತುಕೊಳ್ಳುತ್ತಾರೆ.)

ದಳಪತಿ

ಒಳ್ಳೆಯ ಜಾಗ— ಇಲ್ಲೆ ನಿಲ್ಲುವ
ಪುರದ ಪುಂಡರನು ನಾವಿಲ್ಲಿರುವ
ಸುದ್ದಿಯ ಹದ್ದಿನೊಳಿಟ್ಟರೆ ಸಾಕು.
ವಿಕಟ, ದೊರೆಬಿನದಿಗ ನೀ ಜೊತೆಗಿರಬೇಕು.

(ಕೈಹಿಡಿದು ಕುಳ್ಳಿರಿಸುವನು.)

(ಹಣ್ಣಿನ ರಸವನ್ನು ಮೆಲ್ಲನೆ ಎಲ್ಲರೊಡನೆ ಕುಡಿಯುತ್ತಾ)

ಮಂತ್ರಿಗಳೇ, ಸತ್ತವರೆಷ್ಟು ಜನ ?

ಪ್ರಚಾರಣ ಮಂತ್ರಿ

ಎರಡು ಮೂರು ಇಂತೈದಾರು ದಿನ.

ದಳಪತಿ

ಇಷ್ಟಕೆ ಈ ರಂಪವೆ ? ಲೇಸಾಯ್ತು!

ಐ. ಜಿ. ಪಿ.

ಒಂದೆರಡೇ ದಿನವೂ ಕೇಸಾಯ್ತು.

ದಳಪತಿ

ಸಾವಿರ ಬೀಳದೆ ಏತರ ದೊಂಬಿ ?

ವಿಕಟಕವಿ

ಯಮುನೆ ಕೆಟ್ಟ ಐಜೀಪಿಯ ನಂಬಿ!

ದಳಪತಿ

ಪ್ರಾರಂಭದೊಳೇ ತಡೆವುದು ತಪ್ಪು.

ವಿಕಟಕವಿ

(ಐ.ಜಿ.ಪಿ. ಯ ಕಡೆ ನೋಡುತ್ತ)
ತಡೆದೊಡಾಗದ್ಯೆ ಮೊಡಲುಗಳೊಪ್ಪು
ಬಳೆದುದನಡಗಿಸೆ ಅದೆ ಮೊಹನತ್ತು
ಮೊಟ್ಟಲಿಡಲಿ ಪದವಿಗೆ ಜನ ಸತ್ತು.

ದಳಪತಿ

ನಿಮ್ಮವನೆಂದೇ ನನಗೆನ್ನೆಣಿಕೆ
ಈ ರಾಜ್ಯದ ಹಿತವೇ ಹಂಬಲಿಕೆ
ಪ್ರಜೆಯ ಮೇಲ್ಮೆಯನೆ ಚಿಂತಿಸುತಾಳು.
ಅವರಿಚ್ಛೆ ಎಂದರೆಲ್ಲವು ಹಾಳು—
ಮಂತ್ರಿಗಳೇ ಇದು ಹಬ್ಬಿತು ಹೇಗೆ?

ಪ್ರಚಾರಣ ಮಂತ್ರಿ

ಇಹನಲ್ಲಾ ಆ ನಾಯಕ ಹುಚ್ಚ
ಜಗಮೊಂಡನವ ಸಾವಿಗು ಬೆಚ್ಚ.

ದಳಪತಿ

ಆತನ ಸೆರೆಯಿಂ ಬಿಟ್ಟುದೆ ತಪ್ಪು.

ವಿಕಟಕವಿ

ಬಿಳಿಯುವರಾಳಿಕೆ ಆತಗೆ ಕಪ್ಪು!

ದಳಪತಿ

ಈ ರಾಜ್ಯದೊಳೀ ಮಾತೊಪ್ಪುವುದೇ?

ವಿಕಟಕವಿ

ಅವರ ನೆರಳಲ್ಲಿ—ಅದುವೂ ಬಿಳಿದೇ?

ಪ್ರಚಾರಣ ಮಂತ್ರಿ

ಈ ಮಾತನು ಇಲ್ಲಿಗೆ ಬಿಡು ವಿಕಟ.

ದಳಪತಿ

ತಡೆಯಬೇಡಿ, ನುಡಿದಾಡಲಿ ಮರ್ಕಟ.
ಆಯ್ತಾಮೇಲೆ?

ಪ್ರಚಾರಣ ಮಂತ್ರಿ

ಪ್ರಜೆಯಂಕುಶ ದೊರೆಗಿರಬೇಕೆಂದೇ
ಚಳವಳಿ ಹೂಡಿದ ಜನಗಳ ಮುಂದೆ.
ಗುಡಿಯಾಡಿಸಿ ಹೊರಟಿತು ಮೆರವಣಿಗೆ.
ಮೊದಲಾಯಿತು ಮುಸ್ಲಿಂ ಗರ್ಜನೆಗೆ.
ಎತ್ತು ಇತ್ತೆಡೆ, ಕೋಣ ಅತ್ತೆಡೆ
ನಾಡ ತೇರು ಸಾಗುವುದೆಂತೆತ್ತೆಡೆ?
ನೆಲೆಗೆಡದವು ಹದುಳದಿ ನಡೆವಂತೆ
ಏಗೆಯ್ವೆವೆಂದೆ ಸಂತತ ಚಿಂತೆ.
ಇವರಿಗೆ ಬೇಕು, ಅವರಿಗೆ ಬೇಡ
ಕೇರಿ ಕೇರಿಗಳೆ ಜಗಳದಬಾಡ
ಮಸೀದಿ ಹತ್ತಿರ ಓಲಗವಾಗೆ
ಕಲ್ಲೆಸೆದರಂತೆ ಮೂರ್ತಿಯ ಮೈಗೆ.

ವಿಕಟಕವಿ

ಛೆ, ಛೆ,
ಮಸೀದಿ ಮುಂದೆಯೆ ಮಂಗಳವಾದ್ಯ!

ದಳಪತಿ

(ನಗುತ್ತಾ)

ದಿಟ್ಟರೆ ಸೈ ಈ ಮುಸ್ಲಿಂ ಮುಂದಿ
ಅಲ್ಪರೆಂದು ಹೋಗರು ಎದೆಗುಂದಿ
ಆದೊಡೆ ವಿಗ್ರಹನಿಗ್ರಹ ತಪ್ಪು
ಅವುಗಳ ಗೌರವವೇ ನನಗೊಪ್ಪು.

ವಿಕಟಕವಿ

ದೇವರಿಲ್ಲದಿರೆ ಗತಿಯೇನೆಮಗೆ
ಹೊಟ್ಟೆ ನೊಂದರೂ ಮುಳಿವರು ನಿಮಗೆ.
ಒಂದು ಅನಿಷ್ಟಕ್ಕೊಬ್ಬ ಮುನೀಶ್ವರ
ಇಂತಿರದಿರುವಾ ರಾಜ್ಯವೆ ನಶ್ವರ.
ವಿಗ್ರಹಗಳು ಇದ್ದಷ್ಟೂ ಶಾಂತಿ
ಅವು ಬಿದ್ದರೆ ಎಲ್ಲೆಲ್ಲೂ ಕ್ರಾಂತಿ.

ಐ. ಜಿ. ಪಿ.

ಭಲೆ ವಿಕಟ, ನನ್ನಿಯನೇ ನುಡಿದೆ
ಅದಕೇ ನಾನೀ ಪುಂಡರ ತಡೆದೆ.

ದಳಪತಿ

ಆಮೇಲೆ?

ಪ್ರಚಾರಣ ಮಂತ್ರಿ

ಹಿಂದೆ ನಡೆಯದಾ ನರಬಲಿಯೆಲ್ಲಾ
ನಡೆದು ತಣಿದುವೈ ಭೂತಗಳೆಲ್ಲಾ.

ವಿಕಟಕವಿ

ನಮ್ಮದು ಮಾರೀ ಪೂಜೆ
ಅವರದು ಗೋರೀ ಪೂಜೆ

ನಮಗೋ ದುಗರ್ ಅವರಿಗೊ ದಗರ್
ಇಬ್ಬರಿಗೂ ಕಡಿತದೊಳೇ ಸ್ವರ್ಗ.

**ದಳಪತಿ**

(ನಗುತ್ತಾ ವಿಕಟನ ಬೆನ್ನು ಸವರಿ)
ಕುಸ ಸುಮ್ಮನಿರೈ ವಿಕಟ–
ಆ ಮೇಲೆ ?

**ಪ್ರಚಾರಣ ಮಂತ್ರಿ**

ಊರಿಗಾಯಿತೀ ದಳಗಳ ಗಸ್ತು
ಪೋಲೀಸರಿಗಂತೂ ಬಲು ಸುಸ್ತು
ದೊರೆ ಕೊಟ್ಟರು ಜನಗಳಿಗೆಚ್ಚರಿಕೆ
ಮುಖಂಡರಿತ್ತರು ಮುಚ್ಚಳಿಕೆ
ಆದೊಡೆ ಸಭೆಗಳ ನಿಲ್ಲಿಸಲಿಲ್ಲ
ರಾಜಕೀಯದಾಕಾಂಕ್ಷೆಯ ಸೊಲ್ಲ
ತಡೆಯಲಾಗದೆಂದರಸರಾಣತಿ.

**ದಳಪತಿ**

ದಿಟ ದಿಟ, ಒಡೆಯರದತಿ ತೀಕ್ಷ್ಣಮತಿ
ಉಗ್ಗಡಿಸಲಿ ಬೇಕಾದಷ್ಟು ಜನ
ಕೋಡಿ ತೆಗೆಯೆ ತಡೆಗೆಡದವರ ಮನ.
ಆದೊಡೇನಾಸೆ ಏತಕೆ ಜಗಳ ?

**ವಿಕಟಕವಿ**

ನಿಮಗೂ ದೊರೆತನದಾಸೆ
ಪ್ರಜೆಗೂ ದೊರೆತನದಾಸೆ
ಅದಕೇ ಜಗಳ.

**ದಳಪತಿ**

ನಮಗೇತಕೋ ದೊರೆತನ
ದೊರೆಗೇ ಸರಿ ದೊರೆತನ.

ನಾವೆಲ್ಲರು ಸರ್ಕಾರದ ಸೇವಕರು.

ಐ. ಜಿ. ಪಿ.

(ನಗುತ್ತಾ)

ಪ್ರಜೆಯಿಂದಲೆ ದೊರೆಯೋ
ದೊರೆಯಿಂದಲೆ ಪ್ರಜೆಯೋ
ದೊರೆಯಿಂದಲೆ ಸೇವಕರೊ
ಸೇವಕರಿಂದಲೆ ದೊರೆಯೋ
ಇಲ್ಲೇ ಸಂಶಯುವೆನಗೆ.

ವಿಕಟಕವಿ

ಒಳ್ಳೆಯ ಪ್ರಶ್ನೆ—ನಿಮ್ಮಿಂದಲೆ ದೊರೆ
ಎನ್ನುವ ಸರಣಿಯು ಮೊದಲು ವಾದಿಸುವೆ
ಆದರ ತಲೆಕೆಳಗ ಬಳಿಕ ಬೋಧಿಸುವೆ:
ನೀವಿರದಿದ್ದರೆ ಜೈಲೇ ಇಲ್ಲ
ಜೈಲಿಲ್ಲದಿರಲು ಕೋರ್ಟೂ ಇಲ್ಲ
ಕೋರ್ಟಿಲ್ಲದಿರಲು ಲಾಯರೆ ಇಲ್ಲ
ಲಾಯರಿಲ್ಲದಿರೆ ಲಾವೂ ಇಲ್ಲ
ಇಲ್ಲದೆ ಹೋಗಲು ಲಾಯಲ್ಟಿ
ಅಳಿವುದಲ್ಲವೇ ರಾಯಲ್ಟಿ ?
ಬಳಿಕಿದರೀ ತಲೆಕೆಳಗನು ಕೇಳಿ
ಸರಿಯೋ ಇಲ್ಲವೊ ನೀವೇ ಹೇಳಿ.
ದೊರೆಯಿಲ್ಲದೆ ಸಿರಿವಂತರೆ ಇಲ್ಲ
ಸಿರಿವಂತರಿರದೆ ಸರ್ಕಾರವಿಲ್ಲ
ಸರ್ಕಾರವಿರದೆ ದರ್ಜೆಗಳಿಲ್ಲ
ದರ್ಜೆಗಳಿರದಿರೆ ಅರ್ಜಿಗಳಿಲ್ಲ
ಅರ್ಜಿಗಳಿಲ್ಲದೆ ಫಿದ್ವಿಗಳಿಲ್ಲ
ಫಿದ್ವಿಗಳಿರದಿರೆ ಫಿರ್ಯಾದಿಲ್ಲ

ಫಿರ್ಯಾದಿಲ್ಲದೆ ಪೋಲೀಸಿಲ್ಲ.
ಪೋಲೀಸಿಲ್ಲ ಫಿರ್ಯಾದಿಲ್ಲ
ಅಚ್ಚಾ ಅದ್ರಿಗಳೇ ಎಲ್ಲ !

**ಪ್ರಚಾರಣ ಮಂತ್ರಿ**

ಸಾಕು ಸಾಕು ಹುಚ್ಚಾಯಿತು ಮಾತು.

**ದಳಪತಿ**

ಆಹುದಹುದು—ಅದು ಫೋಗಲಿ ಹೂತು.
ಆದೊಡೇನಾಸೆ—ಏತಕೆ ಜಗಳ ?

**ಪ್ರಚಾರಣ ಮಂತ್ರಿ**

ಮತವಳರಿಗೇಕೆ ಈ ಕೆಟ್ಟ ಛಲ ?
ಕೂಲಿಗೇಕೆ ಬಂಡಾಯದ ಹುಚ್ಚು ?

**ವಿಕಟಕವಿ**

ಬಂಡವಾಳಿಗರಿಗಾರದು ನೆಚ್ಚು ?

**ಐ. ಜಿ. ಪಿ.**

ಒಬ್ಬನ ಹಿತ ಮತ್ತೊಬ್ಬನ ಮಿತ—
ಮೆಕ್ಕಾ ಮಾಸ್ಕೋ ಲಂಡನ್ ತುಯ್ತ
ನಮ್ಮ ಜನಕೆ—ಅದರಿಂದೀ ಸುಯ್ತ.
ನಮ್ಮ ಬಾಳ್ವೆಗಿಲ್ಲಾಗಲು ಕೇಂದ್ರ
ನಾಚುವನೆಮ್ಮೈಸಿರಿಗಂದಿಂದ್ರ.

**ವಿಕಟಕವಿ**

(ಹಾಡುವನು)

“ ಹಿಂದೂ ಮುಸ್ಲಿಮರೆಂವರೆ ತೊಂದರೆ
ನಾವೆಲ್ಲಾ ಈ ನಾಡಿನ ಕಂದರೆ
ನಮ್ಮದು ನಮಗೆಯೆ ತಾ ತಾ ಎಂದರೆ
ಎಲ್ಲ ಕೊಟ್ಟು ಇವರೋಡುವರೇ !

ಹಿಂದೂ ಮುಸ್ಲಿಮರೊಂದೇ. ”
ಒಳ್ಳೆಯ ಪಲ್ಲವಿಯಿದು ಮಂತ್ರಿಗಳೇ.

**ದಳಪತಿ**

(ನಗುತ್ತಾ)
ಆದರೆ ಯಾರಿಗು ಶಿಸ್ತೇ ಇಲ್ಲ
ಹೇಗೆ ಹಂಚುವರೊ ದೇವರೆ ಬಲ್ಲ.

ಪ್ರಚಾರಣ ಮಂತ್ರಿ

ಬಿದ್ದಾ ಬೀಳಾ ಓಡುವುದೇಕೆ
ಒಬ್ಬನ ಮೇಲೊಬ್ಬ ಬೀಳುವುದೇಕೆ?
ದಿಲ್ಲಿಯೊಳಗೆಲ್ಲ ನರಳುವುದೇಕೆ
ಇದಕ್ಕೆ ನಾವಳಬೇಕೆ ನಗಬೇಕೆ.

ಐ. ಜಿ. ಪಿ.

ಎಲ್ಲರು ಕ್ಯೂ ಸಿಲ್ಲುವುದೊಳ್ಳೆಯದು
ಆಗೆಲ್ಲರಿಗವರವರದು ಸಲ್ಲುವುದು.

**ವಿಕಟಕವಿ**

ಪೋಲೀಸರಿಗೇ ಹೊಳೆವ ಮಾತಿದು
ಆದೊಡೆ ಕ್ಯೂ ನಿಲ್ಲಿಸೆ ಹೊಣೆ ಯಾರದು?

ಐ. ಜಿ. ಪಿ.

ಮಿಲಿಟರಿ ಮತ್ತು ಪೋಲೀಸರದು.
ಈ ದೇಶಕೆ ನಾವಲ್ಲವೆ ಜೇಲಿ?

**ವಿಕಟಕವಿ**

ಹೊಲವನ್ನೇ ನುಂಗುವ ಹುಲಿ ಜೇಲಿ!
ಎಂತಿಹುದೋ ಆ ಅಲ್ಲನ ಲೀಲೆ.

**ದಳಪತಿ**

ಅಲ್ಲವು ಇಲ್ಲ ಬೆಲ್ಲವು ಇಲ್ಲ
ನಮಗೀ ರಾಜ್ಯದ ಆಸೆಯೆ ಇಲ್ಲ.

ಪ್ರಚಾರಣ ಮಂತ್ರಿ

ದಿಟ,

ಕೊಡುವವರಿದ್ದರು ಪಡೆವರು ಬೇಕು.

ಐ. ಜಿ. ಪಿ.

ಕೋ, ಎಂದೊಡನೆಯೆ ಬೆನ್ನೊಳು ಬಾಕು!

ವಿಕಟಕವಿ

ಕೊಡಲಿ ಬಿಡಲಿ, ಕೊಡಲಿಯಾಡಲಿ
ಈ ರೋರ್ಮ ಲೀಲೆಯ ಜಗ ನೋಡಲಿ
ಅವರಿರಲೆಂದೇ ನಾಡು ಬೇಡಲಿ
ಮಿಲಿಟರಿ ಪೋಲೀಸೆಲ್ಲರ ಕಾಡಲಿ
ಇವರ ಹೊಗಳಿ ಕವಿ ಕಬ್ಬವ ಮಾಡಲಿ
ಗಮಕಿ ಅದ ಹಾಡಿ ಕಾವಂ ನೀಡಲಿ
ಕೋರ್ಟೊಳೆಲ್ಲರೂ ವ್ಯಾಜ್ಯವ ಹೂಡಲಿ
ಅಸೆಂಬ್ಲಿಯೊಳಗಡೆ ನುಡಿ ಸಿಡಿದಾಡಲಿ
ಪತ್ರಿಕೆಗಳು ಹಣೆಯಕ್ಕರ ಸೂಡಲಿ
ಮೇಜಿನ ಸುತ್ತ ಮುಖಂಡರು ಕೂಡಲಿ
ಮಂತ್ರೀ ತಂತ್ರಿಗಳೂ ಹಾರಾಡಲಿ
ಡಿಲ್ಲಿಯ ಮಾಡದಲಿ
ಗಾಂಧಿಯ ಗೂಡಿನಲಿ
ಲಂಡನ್ನಿನ ಬಿಳಿ ಬೀಡಿನಲಿ
ಮುಗಿಯದ ಮಾತಿನ ಜಾಡಿನಲಿ.

ಪ್ರಚಾರಣ ಮಂತ್ರಿ

(ನಗುತ್ತಾ)

ಭಲೆ, ಭಲೆ, ವಾಗ್ಝುರಿಯೊಳು ವಾಗ್ಮಿಯನೇ ಮೀರಿಸಿಹೆ
ನಡೆತವನೆಲ್ಲವ ಈ ನುಡಿಯೊಳೆ ಸೇರಿಸಿಹೆ!

ದಳಪತಿ

(ನಗುತ್ತಾ)

ಸರಿಯೇ, ಇದಕೇನಿದೆ ಪರಿಹಾರ?
ಹತ್ಯಾಗ್ರಹವೋ ಸತ್ಯಾಗ್ರಹವೋ?

ವಿಕಟಕವಿ

ಕಂಡೇ ಇದೆ, ಸತ್ಯಾಗ್ರಹ.

ದಳಪತಿ

ಮೊದಲು ಸತ್ಯಾಗ್ರಹ
ಬಳಿಕ ಹತ್ಯಾಗ್ರಹ!

ವಿಕಟಕವಿ

ಅಲ್ಲಲ್ಲ ದಳಪತಿ
ಮೊದಲೂ ಸತ್ಯಾಗ್ರಹ
ಕೊನೆಗೂ ಸತ್ಯಾಗ್ರಹ
ಹತ್ಯಾಗ್ರಹಕ್ಕೆ ಸತ್ಯಾಗ್ರಹವೇ ಮದ್ದು.

ಐ.ಜಿ.ಪಿ.

ಹತ್ಯಾಗ್ರಹ?

ವಿಕಟಕವಿ

ಹತ್ತೇನೆಂಬಾಗ್ರಹ ಹತ್ಯಾಗ್ರಹ.
ಸತ್ತೇನೆಂಬಾಗ್ರಹ ಸತ್ಯಾಗ್ರಹ—
ಹತ್ತ ಬಂದವಗೆ ಹೆಣವೆ ಸರ್ವಾಂ!
ಸತ್ಯಾಗ್ರಹದ ಹೆಚ್ಚಳಿಕೆಯನು
ಕೇಳಿಬಲ್ಲಿರಾ ದಳಪತಿ ನೀವು?

ದಳಪತಿ

ಇಲ್ಲ, ವಿಕಟಕವಿ.

ವಿಕಟಕವಿ

ಹತ್ಯಾಗ್ರಹವೋ ನಿಮ್ಮಯ ರೀತಿ.
ಸತ್ಯಾಗ್ರಹವೋ ಗಾಂಧಿಯ ನೀತಿ.

ಸತ್ಯಾಗ್ರಹದೊಳು
ಮುದಿಯರೆ ಮುಂದೆ
ಯುವಕರೆ ಹಿಂದೆ
ಹೆಂಗಸರೂ ಗಂಡಸರೂ ಒಂದೆ
ರೋಗಿಗಳೂ ಕಾಳಗಗೊಡಬಹುದು
ಸತ್ತವರಿಗಿಲ್ಲಿ ಸ್ಮಾರಕವಹುದು
ಶ್ವೇತರ ಶಿಕ್ಷಣ ಬೇಕೇ ಇಲ್ಲ
ಆತ್ಮರಕ್ಷಣೆಯ ಮಾತೇ ಇಲ್ಲ
ಶಸ್ತ್ರಾಸ್ತ್ರಂಗಳ ಹಂಗೂ ಇಲ್ಲ
ಕಲಿಯೆ ಸಾಕು ಗೋವಿಂದನ ಸೊಲ್ಲ
ನಡೆಯುದಿಲ್ಲಿ ಪಲಾಯನ ಸೂತ್ರ
ಉಳಿವುದು ಶರಣೆನ್ನದ ಛಲ ಮಾತ್ರ
ಅಬಲೆಯರೂ ಆಬಾಲವೃದ್ಧರೂ
ಇಂತು ಕಾಳಗಿಸೆ ಆರು ಗೆದ್ದರು ?
ಇಂದುವರೆಗು ಯುವರಕ್ತವ ಹೀರಿ
ಲೋಕ ನಡೆದುದಾವೇಶವ ತೋರಿ
ಸತ್ಯಾಗ್ರಹವಿದ ಬದಲನು ಮಾಡಿ
ಬಿಸಿಯಾರಿದ ಮುದಿಯರ ಮುಂದೂಡಿ
ಲೋಕವ ಬಿಡುವುದು ಜವ್ವನಿಗರಿಗೆ
ಸಹಜೌದಾರ್ಯದ ನವತರುಣರಿಗೆ
ಆದರಿಂ ಸತ್ಯಾಗ್ರಹ ಗೆಲ್ಗೆ!

ಐ.ಜಿ.ಪಿ.

(ನಗುತ್ತಾ)

ಮುದಿಯರು ಸತ್ಯಾಗ್ರಹದೊಳೆ ಇರುವಂತೆ
ಇನ್ನು ಮೇಲಹುದು ನವಯುವಕರ ಚಿಂತೆ.

ದಳಪತಿ

ಇದು ಎಲ್ಲಾ ಬರಿ ಗಾಂಧೀಹುಚ್ಚು.

**ವಿಕಟಕವಿ**

ಆದೊಡೆ ಸ್ವರಾಜ್ಯಕಿದುವೇ ನೆಚ್ಚು.
ಬೆದರುವುದೂ ಇಲ್ಲ
ಬೆದರಿಸುವುದು ಇಲ್ಲ
ನಾವೇ ಅರಸು ನಾವೇ ಆಳು
ಇಂತಾದೊಡೆಯೇ ಮುಗಿವುದು ಗೋಳು.

**ದಳಪತಿ**

ಸರಿಯೇ ವಿಕಟ. ಆ ವೇಳೆಗೆ
ದೊರೆಯೂ ಇಲ್ಲ ದವಲತ್ತಿಲ್ಲ
ನಾವೂ ಇಲ್ಲ ನೀವೂ ಇಲ್ಲ.

(ಮಹಾರಾಜರ ಎ.ಡಿ.ಸಿ. ಪ್ರವೇಶಿಸುತ್ತಾನೆ.)

**ಎ.ಡಿ.ಸಿ.**

ನಾವೂ ಇಲ್ಲವೆ, ದಳವಾಯಿ ?

**ದಳಪತಿ**

ನೀವೇ, ನೀವಿಲ್ಲದೆ ಉಂಟೆ ? ದಯಮಾಡಿ ದಯಮಾಡಿ.
ನಮ್ಮೀ ವಿಕಟನಪದತಿಬಾಯಿ.

**ಎ.ಡಿ.ಸಿ.**

ಓ, ವಿಕಟಕವಿ ಇಲ್ಲೇ ಇಹರೇ ?
ಸಿಕ್ಕದೆ ಈತನ ಪತ್ತೆ
ಊರೆಲ್ಲಾ ಸುತ್ತುತ ಬೇಸತ್ತೆ.
ದೊರೆ ಹಂಬಲಿಸಿಹರೈ ನಿಮಗೆ
ಬನ್ನಿರಿ ಬನ್ನಿರಿ, ಅಬ್ಬಾ ಸಿಕ್ಕಿದರಲ ಕೊನೆಗೆ

**ಅಧಿಕಾರಿತ್ರಯರೂ**

ಏನು ಸಮಾಚಾರ !!!

**ಎ.ಡಿ.ಸಿ.**

ಪೂರ ಪೂರ—

ಆದೊಡೀಗ ಪುರಸತ್ತೇ ಇಲ್ಲ.
ಪ್ರಧಾನಿ ನಾಯಕ ಮುಲ್ಲ
ಮೂವರ ಮಾತಿಗು ನೆಲೆಯಿಲ್ಲ.

ವಿಕಟಕವಿ

ನೆಲೆಯಿರದಿದ್ದರು ಬೆಲೆ ಇದೆ ತಾನೆ?

ಎ. ಡಿ. ಸಿ.

ಅದ ದೇವರೆ ಬಲ್ಲ.

(ವಿಕಟಕವಿಯೊಡನೆ ಹೋಗುವನು)

ಪ್ರಚಾರಣ ಮಂತ್ರಿ

ಪ್ರಬಲನಾಗುತ್ತಿಹನು ಈ ಹಾಸ್ಯಗಾರ
ಮುಂದಿವನೆ ಈ ರಾಜ್ಯ ಸೂತ್ರಧಾರ.

ದಳವಾಯಿ

ಯಾರಾದರೇನಂತೆ ನಮಗೆಲ್ಲ ಒಂದೆ.

ಐ. ಜಿ. ಪಿ.

ನಮಗೆ ಒಂದೇ ಮಂತ್ರ—ವಂದೇ ವಂದೇ

ಪ್ರಚಾರಣ ಮಂತ್ರಿ

(ನಗುತ್ತಾ)

ದಿಟ, ದಿಟ.
ಏಳು ಬೀಳುಗಳುಂಟು ಮಂತ್ರಿವರ್ಗಕ್ಕೆ.
ಇರುಳಾಯ್ತು
ನಾವಿನ್ನು ಹೋಗೋಣ ನಮ್ಮ ಕಾರ್ಯಕ್ಕೆ.

(ಎಲ್ಲರೂ ಹೊರಡುವರು)

[ತೆರೆ]

## ದೃಶ್ಯ ೨

(ಅರಮನೆಯಲ್ಲಿ ಒಂದು ಕೊಠಡಿ. ದೊರೆ ಕಾದಂಬರಿಯೊಂದನ್ನು ಓದುತ್ತಾ ಕುಳಿತಿದಾನೆ. ಪ್ರತಿಹಾರಿ ಮಾದಯ್ಯ ಬಾಗಿಲಲ್ಲಿ ನಿಂತಿದಾನೆ.)

**ದೊರೆ**

(ಸ್ವಗತ)

ಇವ ಹುಚ್ಚ—ಏನೂ ತಿಳಿಯದವ
ಅನುಭವವಿಲ್ಲದೆ ಬರೆಯಲು ಹೊರಟವ.

(ಪ್ರಕಾಶ)

ಯಾರಲ್ಲಿ ?

**ಮಾದಯ್ಯ**

ಮಹಾಪ್ರಭು !

**ದೊರೆ**

ಮಾದಯ್ಯ ?

**ಮಾದಯ್ಯ**

ಅಹುದೊಡೆಯಾ.

**ದೊರೆ**

ಹೇಳು ಮಾದಯ್ಯ,
ನೀನೇ ಒಡೆಯ
ನಾನೇ ಆಳು—
ಇಂತಾದರೆ ?

**ಮಾದಯ್ಯ**

ಇಂತಾಗುವುದುಂಟೆ, ಬುದ್ಧಿ !

**ದೊರೆ**

ಆದರೆ ?

**ಮಾದಯ್ಯ**

ಎಲ್ಲಾ ಹಾಳು.

**ದೊರೆ**

ಹಾಳು ?
ಏಕೆ, ನಾನೊಳ್ಳೆಯ ಆಳಾಗೆನೆ
ನೀನೊಳ್ಳೆಯ ದೊರೆಯಾಗೆಯ ?

**ಮಾದಯ್ಯ**

ಎಲ್ಲಕು ತರಪೇತಿರಬೇಕೊಡೆಯ.

**ದೊರೆ**

ದಿಟ ಮಾದಯ್ಯ.
ಇದನೇ ಅರಿಯ ಈ ತಿಳಿಗೇಡಿ
ಕಲಿಯುಬೇಕಿವ ತಿರುಪೆಯ ಬೇಡಿ.
ಮಾದಯ್ಯ—

**ಮಾದಯ್ಯ**

ಮಹಾಸ್ವಾಮಿ!

**ದೊರೆ**

ಆ ಮೂವರು ಮುಗಿಸಿಲ್ಲವೆ ಮಾತ ?

**ಮಾದಯ್ಯ**

ಮೋಡ ಆರಬೇಕು
ಇಲ್ಲ ಗಾಳಿ ಬೀಸಬೇಕು
ಅವರೆಗೂ ಹನಿ ನಿಲ್ಲದು ಬುದ್ಧಿ.

**ದೊರೆ**

ಮೋಡಗಳೇ ಆರಲಿ ಬಿಡು ಮಾದಯ್ಯ
ಗಾಳಿಗೆ ಬೀಸುವುದೂ ಬೇಕಿಲ್ಲ.
ಒಳ್ಳೆ ಮಾತಿನೊಳೆ “ ಗಾಳಿ ” ಎಂದೆಯೇ !

ಮಾದಯ್ಯ

ಅಂತಲ್ಲಂತಲ್ಲ ಮಹಾಪ್ರಭು
ಪ್ರಾಣಾಧಾರ........

ದೊರೆ

ಸರಿಯೇ, ಮೆಚ್ಚಿದೆ ಮಾದಯ್ಯ
ಹೋಗು, ವಿಕಟ ಬಂದನೆ ನೋಡು

(**ತುಸು ಹೊತ್ತಿನ ಮೇಲೆ ವಿಕಟಕವಿ ಪ್ರವೇಶಿಸುತ್ತಾನೆ.**)

ದೊರೆ

ವಿಕಟ !

ವಿಕಟಕವಿ

ಬುದ್ಧಿ !

ದೊರೆ

ಇನ್ನು ಮೇಲೆ ನೀನರಮನೆಯೊಳೆ ಬಂದಿ.

ವಿಕಟಕವಿ

ಅಪ್ಪಣೆ ಮಹಾಪ್ರಭು.

ದೊರೆ

ನಾಯಕರೊಡನೇತಕೆ ಬರಲಿಲ್ಲ ?

ವಿಕಟಕವಿ

ಕಾಂಗ್ರೆಸ್ ಘೋಷಣೆ
ಮುಸ್ಲಿಂ ಘೋಷಣೆ
ಈ ಘೋಷಣೆಗಿದು
ಆ ಘೋಷಣೆಗಿದು
ಒಂದರಿನಿನ್ನೊಂದಕೆ ಪೋಷಣೆ.
ಎನಗೂ ಆಯಿತು ಕಂಠಶೋಷಣೆ.

ದೊರೆ

ಓ, ಹಾಗೋ, ನೀನಾರ ಪಕ್ಷ?

ವಿಕಟಕವಿ

ನಾನೇ ?—ಅಧ್ಯಕ್ಷ!

ದೊರೆ

ಅಧ್ಯಕ್ಷ?

ವಿಕಟಕವಿ

ಅಹುದು, ಪ್ರಭು, ಅಧ್ಯಕ್ಷ.
ಈ ಕಡೆ ಕಾಂಗ್ರೆಸ್ ಆ ಕಡೆ ಲೀಗು
ವಂದೇಮಾತರಮುಲ್ಲಾ ಕೂಗು
ನಡುಗಡೆ ದೊರೆಗಳ ಬಿನದಿಗ ನಾನು.
ಇಬ್ಬರಿಗೂ ಹ್ಞೂಗೊಡುವುದಕೇನು.
ಹ್ಞೂ ಹ್ಞೂಗೊಡುತಲೆ ಥೂ ಥೂ ಬಿಟ್ಟೆ
ಕಾಂಗ್ರೆಸ್‌ಕಡೆ ತುಸ ವಾಲಿಕೆ ಕೊಟ್ಟೆ
ರಹಿಮಾರ್ಖಾನಿಗೆ ಬುದ್ಧಿ ಹೇಳಿದೆ
ಕೀರ್ತಿಯ ನಾರಾಯಣ ನೀ ಎಂದೆ.

ದೊರೆ

ಏನೋ, ಇದು, ಕೀರ್ತಿಯ ನಾರಾಯಣ?

ವಿಕಟಕವಿ

ಒಳಗಡೆ ದೇಗುಲ ಮೇಗಡೆ ಮರಳು
ಹಿಂದೂ ಮುಸ್ಲಿಮನಿರವಿಂತಿರಲು
ಒಬ್ಬರಿಗೊಬ್ಬರಿಗೇತಕೆ ಜಗಳ?
ಇಂತೀ ತೆರದೊಳು ಬಲು ಸೂಕ್ತಿಗಳ
ನಾನೊರೆದೆನು ರಹಿಮಾರ್ಖಾನನಿಗೆ
ಕೊನೆಗೂ ಅವನದೆ ಮಾತಾಯ್ತವಗೆ.

ದೊರೆ

ಮಾತಿಗೆ ಸಗ್ಗುವ ಮಂದಿಯೆ ಅವರು
ವೆಂಕಟರಮಣಗೆ ಕಲ್ಲೆಸೆವವರು.
ಮೆಚ್ಚಿದೆ, ಭಲೆ, ಬಲು ದಿಟ್ಟರೀ ಜನ
ಸಾಧಿಸಿಬಿಡುವರು ಪಾಕಿಸ್ತಾನ.

ವಿಕಟಕವಿ

ಪಾಕಿಸ್ಥಾನವೋ ಶ್ವೇತಸ್ಥಾನವೋ?

ದೊರೆ

ನಿಮ್ಮವರಿಗಂತು ಪ್ರೇತಸ್ಥಾನ.

ವಿಕಟಕವಿ

ಈ ಪುರುಷತ್ರಯ ಸಂಘದ ಹುರುಳೇನು?

ದೊರೆ

ರಾಜಕೀಯವನು ಚರ್ಚೆಯೊಳಿಡುವುದೆ ಜಾಣು.

ವಿಕಟಕವಿ

ಆದೊಡೆ ಈ ಮಿತಜನಕೇಕೀ ಬಹುಮಾನ?
ಕಾಂಗ್ರೆಸ್ ಇದಿರಿಸೆ ಇವಕಿದೆಯೇ ತ್ರಾಣ?

ದೊರೆ

ತ್ರಾಣದ ಮಾತಲ್ಲಿದು ಪ್ರಾಣದ ಮಾತು.
ಕಾಂಗ್ರೆಸ್ ಉಸುಬೊಳು ರಾಜತ್ವವೆ ಹೋಹುದು ಹೂತು.
ಈ ಪಕ್ಷಕೆ ಮುಸ್ಲಿಂಲೀಗ್ ಸಹಜದ ವೈರಿ.
ನ್ಯಾಯೌದಾರ್ಯದ ನೆವದೊಳಗಿದ ಪೋಷಿಸಿ ಸ್ಪರ್ಧೆಯೊ-
ಳಿಡುವುದೆ ಹದುಳದ ದಾರಿ.

ವಿಕಟಕವಿ

ರೆಸಿಡೆಂಟ್ ಗುರು ಸಚ್ಛಿಷ್ಯನ ಪಡೆದಿಹನು.
ಇದೊ ಈ ಸಂಧಾನದ ಹವಣು?

ದೊರೆ

(ಭ್ರುಕುಟಿಯನ್ನು ರಚಿಸಿ)

ರೆಸಿಡೆಂಟ್ ರೆಸಿಡೆಂಟ್ ರೆಸಿಡೆಂಟ್
ಮಾತೆತ್ತಿದರಾ ರೆಸಿಡೆಂಟ್.
ಏತಕೆ ನನಗಿಲ್ಲವೆ ಬುದ್ಧಿ?
ಇನ್ನೆತ್ತದಿರಾತನ ಸುದ್ದಿ.
ನಾ ದೊರೆ, ನಾನಾಳಲು ಬೇಕು
ಆಳುವುದಾದೊಡೆ ಸ್ಪೃಹೆಗಳ ಪೋಷಿಸಬೇಕು
ಸ್ವಾರ್ಥಸ್ವಾರ್ಥಸ್ಪರ್ಧೆಯೆ ರಾಜ್ಯಪ್ರಚಲನ ಶಕ್ತಿ
ಅದ ಹಿಡಿತದೊಳಿಡುವುದೆ ರಕ್ಷಣ ಶಿಕ್ಷಣ ಯುಕ್ತಿ

ವಿಕಟಕವಿ

ಕಾಂಗ್ರೆಸ್ಸಿಗೆ ಶಿಕ್ಷೆ
ಮಿಕ್ಕವರಿಗೆ ರಕ್ಷೆ
ಈ ಸಂದರ್ಭದೊಳಿದೆ ನೀತಿ
ಅಲ್ಲವೆ ಮಹಾಪ್ರಭು ?

ದೊರೆ

ಅಲ್ಲಲ್ಲಲ್ಲವೊ—ಎಲ್ಲ ಅನಿಶ್ಚಿತ—
ಆದೊಡೆ, ನಿನಗೇಕೀ ಮುಸ್ಲಿಮರೊಳು ಅಪ್ರೀತಿ

ವಿಕಟಕವಿ

ಮಹಾಪ್ರಭು, ಕನಿಕರ ಅಷ್ಟೆ, ಹಗೆತನವಿಲ್ಲ.
ಈಚೆಗೆ ನಾನೊಂದಾಟಕೆ ಹೋದೆ
ಅಲ್ಲಾಯಿತು ನನಗೊಬ್ಬನ ಬಾಧೆ
ನನ್ನ ಮುಂಗಡೆಯೆ ಬಂದವ ಕುಳಿತ
ಬೃಹದಾಕಾರ, ಬಲು ಘನವಂತ
ನನಗೋ ಆತನ ಬೆನ್ನೇ ನೋಟ

ಆಟದ ಪಾಡಿಗೆ ಸಾಗಿತು ಆಟ
ಅಂತೆಯೆ ನಮ್ಮೀ ಜನಗಳ ಮುಂದೆ
ಕುಳಿತಿಹನರಬ್ಬಿ ಜನಗಳ ತಂದೆ
ಮನದ ಮುಂದಿನೀ ದೇವರ ಗುಟ್ಟು
ಕಣ್ಣ ಮುಂದಿರುವ ಕೌತುಕಕಷ್ಟ
ಅಲ್ಲಾ ಎಂಬರಿಗೀ ನಾಡಿಲ್ಲ
ಈ ಮಂದಿಗೆ ಹಿಂದಿಲ್ಲ ಮುಂದಿಲ್ಲ
ನಾನೂ ಇಲ್ಲ ತಾವೂ ಇಲ್ಲ
ತಾವೇ ಇಲ್ಲ ತಾವೇ ಎಲ್ಲ !

ದೊರೆ

ದಿಟ ವಿಕಟ, ದಿಟ ವಿಕಟ.

(ಸ್ವಲ್ಪ ಹೊತ್ತು ಆಲೋಚಿಸಿ ನಸುನಗುತ್ತಾ)

ಬಲು ವಿಚಿತ್ರವೋ ದೇವರ ಲೀಲೆ
ಯಾರನು ಬಿಡ ನೆಮ್ಮದಿಯೊಳು ಬಾಳೆ
ಒಬ್ಬನ ಹೆಚ್ಚಳಕಿನ್ನೊಬ್ಬ ಮಿತ
ನಿನ್ನೆಲ್ಲಾ ಮತಕೀ ಅಲ್ಲಾ ಮತ
ಆ ಇಂಗ್ಲೀಷರಿಗೀ ಬಡ ಗಾಂಧಿ
ಈತನ ಕುಗ್ಗಿಸೆ ಜಿನ್ನಾ ಮಂದಿ
ದೇಶಭಕ್ತಿಗೀತೆರ ಮತಭಕ್ತಿ
ಈ ಒಂದರಿಸಿನ್ನೊಂದಕು ಶಕ್ತಿ
ಧರ್ಮಕಧರ್ಮ, ನೀತಿಗನೀತಿ—
ಅಂತೂ ಏನೂ ಹೆಚ್ಚದ ರೀತಿ
ನರನೆಣಿಕೆಗೆಲ್ಲ ತ್ರಾಸವ ತೂಗಿ!
ಏರುಪೇರ ಸಮಗೈವನು ಯೋಗಿ
ಈಗೀ ಮುಸ್ಲಿಂ ಮೊಗವಾಡಿಗರು
ನಮಗಾಗಿಹರಯ್ಯಾ ನೇಹಿಗರು.

ಕಾಂಗ್ರೆಸ್ ನೆರೆಗೀ ಮರಳಿನ ದಿಬ್ಬ
ಇವರಿಂದಿಳಿಸುವೆ ನೋಡಾ ಕೊಬ್ಬ.

ವಿಕಟಕವಿ

ಅಹುದಹುದು ಪ್ರಭು—
ಪ್ರಕೃತಿಗೆ ಬ್ರಹ್ಮ, ಮನಕೋ ದೇವರು
ಎಂದೂ ತ್ರಾಸವ ಹಿಡಿದೇ ಇರುವರು.
ಆದೊಡೆ, ನಮಗೇಕೀ ಕಾಂಗ್ರೆಸ್ ವಿದ್ವೇಷ?

ದೊರೆ

ಅವರದು ಬಲು ತಲೆ ಹರಟೆ, ವಿಕಟ.
ಆಡಿದ್ದೇ ನುಡಿ, ಹಿಡಿದಿದ್ದೇ ಹಟ
ಸತ್ಯವೆಲ್ಲ ಇವರೊಳಗೆ ನೆಲೆಯಂತೆ
ದೇವರಿಗೀ ಜನವೇ ಬೆಲೆಯಂತೆ
ನಮ್ಮ ಕಂಡರೂ ಗೌರವವಿಲ್ಲ
ಆಳಬೇಕಂತೆ, ತರಪೇತಿಲ್ಲ
ನಾನಿವರಿಗೆ ದೊರೆ. ಹೆಸರಿಗೆ ಮಾತ್ರ
ಒಪ್ಪಿಸಬೇಕಾಡಳಿತದ ಸೂತ್ರ.
ಇವರಾಳ್ವೊಡೆ ನಾವಾಳುವುದೆಂತು?
ಕಾಲ ಪರಿಸ್ಥಿತಿ ಎಲ್ಲಿಗೆ ಬಂತು!

ವಿಕಟಕವಿ

ಮಹಾಪ್ರಭು, ಕೋಪಿಸಬೇಡಿ,
ಪ್ರಧಾನಿ ಮತ್ತು ರೆಸಿಡೆಂಟಲ್ಲವೆ
ಈಗಲು ಆಳುವರು?

ದೊರೆ

(ಕೋಪದಿಂದ)

ರೆಸಿಡೆಂಟ್, ರೆಸಿಡೆಂಟ್, ರೆಸಿಡೆಂಟ್!
ಬರತರ್‌ಫ್‌ಗೈವೆ ಪ್ರಧಾನಿಯನು.

ವಿಕಟಕವಿ

ಪ್ರಧಾನಿ ಏನಪರಾಧವ ಗೈದ?

ದೊರೆ

ನಮ್ಮನು ಗಾಳಿಯು ಪಟಗೈದ!
ಓ, ನಮಗೆಂದಿಗೆ ತಪ್ಪುವುದೋ, ವಿಕಟ
ರೆಸಿಡೆಂಟ್ ತಲೆಶೂಲೆ?

ವಿಕಟಕವಿ

ಹೂವಾಗೆಂಬನು ಕಾಂಗ್ರೆಸ್ ನಾಯಕ
ಹುಳುವಾಗೆಂಬನು ರೆಸಿಡೆಂಟು.
ಈ ತಲೆಶೂಲೆಯು ತೊಲತೊಲಗೆನ್ನುವ
ನಾಯಕ ವೈದ್ಯನೆ ನಂಟು.

ದೊರೆ

ತೊಲಗೆಂದರೆ ಇವ ತೊಲಗುವನೇನೋ?

ವಿಕಟಕವಿ

ಒಳಗೆ ತಿರುಳು ಬಲಿಯುತಿದೆ
ಹೊರಗೆ ಗಾಳಿ ಬೀಸುತಿದೆ
ತೊಟ್ಟಿಗಿಲ್ಲ ಹಿಡಿವ ಶಕ್ತಿ
ಇಂದೊ ಅಂದೊ ಫಲವಿಮುಕ್ತಿ.

ದೊರೆ

ಕದಡಿಬಿಟ್ಟೆ ನನ್ನರಿವನು ನೀನು.
ಈಗಳೊ ನಾ ದೊರೆ ಸೇವಕ
ಆಗಳೊ ನಾ ದೊರೆ ನಾಮಕ
ಇದರೊಳಗಾವುದು ಜಾಣ?

ವಿಕಟಕವಿ

ನನಗೂ ತೋಚದು, ಬುದ್ಧಿ.
ಆದೊಡೆ ಈ ಪುರುಷತ್ರಯಸಂಘದ ಬುದ್ಧಿ

ಮಾರ್ಗವ ತೋರೀತು.
ಇಗೊ, ಅವರದೆ ಮಾತು.

ಮಾದಯ್ಯ

ಮಹಾಪ್ರಭು, ಪ್ರಧಾನಿ ನಾಯಕ ಮುಲ್ಲಾ.

ದೊರೆ

ತಿಳಿಯಿತು, ದಯಮಾಡಿಸಹೇಳು.

(ಪುರುಷತ್ರಯ ಪ್ರವೇಶ. ನಮಸ್ಕಾರ. ಅಪ್ಪಣೆಪಡೆದು ಸುಖಾಸೀನತೆ. ವಿಕಟಕವಿ ಹೋಗಲು ಅಪ್ಪಣೆಬೇಡುವಂತೆ ತಲೆಬಾಗಲು,)

ದೊರೆ

ಇವನಿರಬಹುದಲ್ಲ, ಪ್ರಧಾನಿ?
(ಪ್ರಧಾನಿ ನಾಯಕರ ಕಡೆ ನೋಡುವನು.)

ಜನನಾಯಕ

ನಮಗಭ್ಯಂತರವಿಲ್ಲ.
(ಎಂದು ಮುಸ್ಲಿಂ ನಾಯಕರನ್ನು ನೋಡುವನು.)

ರಾಜಾಖಾನ್

ನನಗೂ ಸಮ್ಮತವೇ.
ಇವರೂ ಮಂತ್ರಿಗಳಂತೆಯೆ ಸೈ.

ದೊರೆ

ದಿಟ, ದಿಟ, ಬಲು ತಂತ್ರಿ, ಬಲು ತಂತ್ರಿ
ನೀನೂ ಕುಳ್ಳಿರು ವಿಕಟ.
(ವಿಕಟಕವಿ ದೊರೆಯ ಹಿಂಭಾಗದಲ್ಲಿ ಕುಳಿತುಕೊಳ್ಳುವನು.)
ಪ್ರಧಾನಿಗಳೇ, ಸಫಲವಾಯಿತೇ ಸಂಧಾನ?

ಪ್ರಧಾನಿ

ಇಲ್ಲ ಪ್ರಭು, ನಾವಿದ್ದಂತೆಯೆ ಇಹೆವು—

ನಾಯಕರೊಪ್ಪರು ನನ್ನ ಮಾತಿಗೆ
ಇವರೂ ಒಪ್ಪರು ಅವರ ಮಾತಿಗೆ
ಇಂತು ಮೂವರೂ ಮೂರು ರೀತಿಗೆ
ಒಬ್ಬರ ಬೆಂಗಡೆಯೊಬ್ಬರು ನಡೆಯುತ
ಬಂದೆವು ಪ್ರಭುಗಳ ಸನ್ನಿಧಿಗೆ.

**ದೊರೆ**

ಅಲ್ಲಿ ಮುಗಿಯದುದು ಇಲ್ಲಿ ಮುಗಿವುದೇ ?

**ರಾಜಾಖಾನ್**

ಮಹಾಪ್ರಭು,
ನಮಗೂ ಪ್ರಜೆಗಳ ರಾಜ್ಯವೆ ಬೇಕು
ಆದೊಡೆ ಮಿತಜನ ರಕ್ಷಣೆ ಬೇಕು.
ಬಹುಮತದಾಳಿಕೆಯೊಪ್ಪೆವು ನಾವು
ಸಮ್ಮತಿ ದಯಪಾಲಿಸದಿರಿ ತಾವು.
ಎಲ್ಲಕು ಬಹುಮತವೆನೆ ಲೇಸಲ್ಲ
ಎಲ್ಲರ ಹಿತಸಾಧನೆ ಇಂತಲ್ಲ.
ನಮ್ಮ ಮತ ಬೇರೆ ಹಿತವೂ ಬೇರೆ
ನಮ್ಮ ನುಡಿ ಬೇರೆ ನಡೆಯೂ ಬೇರೆ
ಇವಕೆಲ್ಲಕು ಪ್ರಭುರಕ್ಷಣೆ ಬೇಕು
ನಮ್ಮ ಜನವೆ ನಮ್ಮಾರಿಸಬೇಕು.

**ಜನನಾಯಕ**

ಮತದಂತೆಯೆ ಜನದಾರಿಕೆ ಎನಲು
ಸಭೆಯೊಳಹುದು ಮತ ಚರ್ಚೆಯ ಹುಯಿಲು !
ಎಷ್ಟು ದೇವರೋ ಅಷ್ಟು ಮತವಿದೆ
ಅಷ್ಟು ಮತಕು ಅಷ್ಟಷ್ಟು ಜನವಿದೆ.
ರಾಜ್ಯಸಭೆಯಿದೋ ಧರ್ಮಸಂಘವೋ ?

ಶಾಸನ ಸಂಸ್ಥೆಯೊ ತತ್ತ್ವಪ್ರರಂಗವೋ?
ಮನುಜರಾವು ಈ ಜಾನಪದಿಗರು
ಸಹಪ್ರಜೆಗಳು, ನಾಗರೀಕರು.
ಸಭ್ಯಜೀವನವೆ ನಮ್ಮ ಧ್ಯೇಯ
ಮತವನು ಮುಂದಿಡೆ ಹದುಳಕಪಾಯ.
ಎಲ್ಲರಿಗೂ ಉಂಟವರವರ ಮತ
ಒಬ್ಬರ ಮತ ಇನ್ನೊಬ್ಬರಿಗಹಿತ.
ಈ ಸಂದರ್ಭದಿ ತಾಳ್ಮೆಯೆ ವಿಹಿತ.
ಪ್ರಜಾರಾಜ್ಯದೊಳು ಲೇಸು ಬಹುಮತ.

ರಾಜಾಖಾನ್

ಕೇಳಿದಿರಾ, ಪ್ರಭು, ಈಗಳೆ ಹೀಗೆ
ದವಲತ್ತೀ ಜನಕಾದರೆ ಹೇಗೆ?
ಮತವುಳಿದಿನ್ನೇನಿಹುದೈ ನಮಗೆ
ಅದ ಲೆಕ್ಕಿಸದಿಹ ಹಿತವೆಂಥ ಬಗೆ?
ಮೊದಲು ಮುಸ್ಲಿಮರು, ಪ್ರಜೆ ಆ ಬಳಿಕ.
ಸಂಧಿ ಎಂತು ಇದನೊಪ್ಪುವತನಕ?
ಮುಸ್ಲಿಂತನದಿಂ ವಿಶ್ವಪ್ರಜೆಗಳು
ಇಲ್ಲಿಹೆವದರಿಂ ದೇಶಪ್ರಜೆಗಳು.
ಈ ಮತಶಕ್ತಿಯೆ ನಮ್ಮಯ ಶಕ್ತಿ
ಗಳಿಸುವೆವಿದರಿಂ ನಮ್ಮಯ ಮುಕ್ತಿ

ಪ್ರಧಾನಿ

ಹಜರತರೇ, ಈ ಬೆದರಿಕೆಯಿಂದೇನುಪಯೋಗ?
ಪ್ರಭುಸನ್ನಿಧಿಯೊಳು ಇದಕಿಲ್ಲವು ಜಾಗ.

ರಾಜಾಖಾನ್

ಕ್ಷಮಿಸಿರಿ, ಖಾವಂದ್, ಮಾಫ್‌ಮಾಡಿ
ಇದುವರೆಗಿದ್ದಂತೆಯೆ ಕಾಪಾಡಿ

ನಮ್ಮನು ರಕ್ಷಿಸಿರೀ ಜನದಿಂದ.
ಇಂದಿನ ದವಲತ್ತೀ ಬಲು ಚೆಂದ.
ಈಗಿದರೊಳು ಬದಲಾವಣೆ ಏಕೆ ?
ಈ ಜನಕೋ ಮಿತಿ ಇಲ್ಲದ ಬಯಕೆ
ರಾಜರೇತಕೆ ? ಆಳಲಲ್ಲವೇ ?
ನಾವೋ ಪ್ರಜೆಗಳು, ಆಳಬಲ್ಲೆವೇ ?
ನೆಚ್ಚಿನ ಭಟರೀ ಮುಸ್ಲಿಂ ಜನತೆ
ಕೇಡಾಗದು ನಿಮಗೆಮ್ಮೊಳು ಮಮತೆ.

ಜನನಾಯಕ

ಪ್ರಭು, ಇದುವೇ ನಿಮ್ಮಯ ನೀತಿ
ಬೇಡವೆ ಪ್ರಜೆಗಳ ಪ್ರೀತಿ ?
ಸಲ್ಲದಿನ್ನು ಪಕ್ಷಪಾತ
ಸಂದರಹುದು ರಾಜ್ಯಪಾತ !
ಒಬ್ಬನ ಹಕ್ಕನು ಕಸಿದು
ಮತ್ತೊಬ್ಬನಿಗದನೆಸೆದು
ಅಧೋಮೃಗರ ಅತಿಮೃಗರ
ಸೃಷ್ಟಿಗೈದ ಪರಜನರ
ಸ್ವಾರ್ಥನೀತಿ ಸಲದಿನ್ನು.
ಕಾಲವನರಿತರೆ ಚೆನ್ನು.
ಪರಬಲ ಕುಸಿಯುತ್ತಿಹುದು.
ಜನತೆಯೊ ಎಚ್ಚತ್ತಿಹುದು.
ಕೃತಕಾಯಸ್ಕಾಂತವನು
ನೆಮ್ಮಿದ ಲೋಹದ ಗುಂಡನು
ಹೋಲುತ ಬೀಳುವಿರೇನು
ಬೀಳುತ ಘಾತಿಪರೇನು
ನೆಚ್ಚಿರುವೀ ಪ್ರಜೆಗಳನು ?
ದೊರೆ, ತಮಗಾರಿಂ ಮನ್ನಣೆ

ತಮ್ಮ ಭಾಗ್ಯಕಾರು ಹೊಣೆ ?
ಪ್ರಜೆ, ಪ್ರಜೆ, ಪ್ರಜೆ, ಅರಸಾ,
ಅವರೊಳು ಸಲ್ಲದು ವಿರಸ.
ಅವರೊಲವಿಂದಭಿಷೇಚನ
ಗೈಯಲು ದೊರೆವುದು ದೊರೆತನ.
ಇಲ್ಲವೊ ನಿಶ್ಚಯ ಪತನ.
ಸೇವದರಿಂದಿರಿ ಜತನ.
ಆಗಲಿ ಹೃತ್ ಪರಿವರ್ತನ.
ಆಗುದಿಪುದು ನವಶಕ್ತಿ
ರಾಷ್ಟ್ರೋದ್ದೀಪಕ ಶಕ್ತಿ.
ಪ್ರಕೃತ್ಯುದಿತ ಪೌರುಷಕೆ
ಲಾಂಛನವಾಗುವ ಹರ್ಷಕೆ
ಮೀಸಲಿರಿಸಿ ನಿಮ್ಮಿರವ.
ಹರಿ ಬೆಳಗಲಿ ನಿಮ್ಮರಿವ.

(ಮುಸ್ಲಿಂ ನಾಯಕರನ್ನು ಕುರಿತು)

ನಿಮಗೇತಕೆ ನೇಹಿಗರೇ
ಪರಕೀಯತೆಯೊಳಗಕ್ಕರೆ ?
ವೈರಸ್ಯದೊಳಭ್ಯುದಯವ
ಸಾಧಿಸೆ ಬಯಸುವ ಮನವ
ತ್ಯಜಿಸುತಲಿಡಿರೈ ನಂಬಿಕೆ.
ನ್ಯಾಯಪರರಿಗೇನಂಜಿಕೆ ?
ನಮ್ಮ ಲಕ್ಷ್ಯ ಸರ್ವೋದಯ.
ಈ ಧ್ಯೇಯದೊಳಗಾರಿಗೆ ಭಯ ?
ಸತ್ಯವೆ ನಮ್ಮಯ ಸೂತ್ರ
ರಾಜ್ಯರಥಕು ಇದೆ ತೋತ್ರ.
ಅಹಿಂಸೆ ಸಾರಥಿ ಇದಕೆ.
ಜರುಗುವುದೆಲ್ಲರ ಮುದಕೆ.

ಸರ್ವೋತ್ಸವವಹುದೀ ತೆರ.
ದೇವ ದೇವ ದೇವಾಸುರ
ಮರ್ತ್ಯರಾದ ನಮಗೇಕೆ?
ರಾಜ್ಯದಾಟ ಇಹಸೌಖ್ಯಕೆ.
ಸಕಲಜನಪ್ರತಿನಿಧಿಗಳು
ಸಭೆಸೇರುವುದಿದ ಗಳಿಸಲು.
ಸದಸ್ಯರೆಲ್ಲರು ದೇಶವ—
ಕೋಮನಲ್ಲ—ಹಿತತತ್ತ್ವವ
ಪಕ್ಷವಿಪಕ್ಷದಿ ಬಿಂಬಿಸಿ
ನ್ಯಾಯಕೆ ತರ್ಕವ ಹೊಂದಿಸಿ
ಬಹುಗಳ ಹಿತವೇ ಬಹುಮತ-
ವೆಂಬ ತೆರದಿ ಪ್ರಭುಸಮ್ಮತ-
ದೊಳು ಶಾಸನಗೈದಾಳಲು
ಆರಿಗೆ ಏನಿದೆ ದಿಗಿಲು?
ಪುಡಿಮೀನಿಗೆ ಬಯಸುತ ಕೆರೆ-
ಕಟ್ಟೆಯನೊಡೆವರೆ ಹಿರಿಯರೆ?
ಮಿತಿಯಿಡಿರೈ ವೈಷಮ್ಯಕೆ
ಮತಿಮಾಡಿರಿ ಸಹಕಾರಕೆ.

ರಾಜಾಜೀ

ಮುಗಿಯಿತೊ ನಿಮ್ಮ ಪ್ರದೇಶ?
ಬರಿನುಡಿ—ಬರಿ ಆವೇಶ.
ಅಹಿಂಸೆ ಅಹಿಂಸೆ ಅಹಿಂಸೆ!
ನಿಮ್ಮ ಹಿಂಸೆ ಬಲು ಹಿಂಸೆ
ಮಾತಿಗು ಮಾತಿಗು ಸತ್ಯ
ನಾಯಕತನಕಿದೆ ಭತ್ಯ.
ನಾವೋ, ಬೇರೆ ಜನಾಂಗ
ನಿಮ್ಮಿಂದಲೆ ನಮಗೆ ಭಂಗ.

ಮೌನದಿ ಪ್ರಾರ್ಥಿಸೆ ನಾವು
ಗದ್ದಲ ಗೈವಿರಿ ನೀವು.
ನಮ್ಮನ್ನವ ನಾವುಣ್ಣಲು
ನಿಮ್ಮವರದೆ ಬಲು ಹುಯಿಲು.
ನಮ್ಮತರವೆ ನಡೆ ಎಂಬಿರಿ.
ನಮ್ಮತರವೆ ನುಡಿ ಎಂಬಿರಿ.
ನಮ್ಮಂತೆಯೆ ಇರದಿದ್ದೊಡೆ
ಈ ನಾಡಿಗೆ ಹೊರತೆಂಬಿರಿ.
ನಿಮ್ಮಂತಾದರೆ ನಾವು
ನಮಗೇನುಳಿವುದು ? ಸಾವು !
ಈಗೆಮಗಿದೆ ದೊರೆಮನ್ನಣೆ
ಮುಂದದಕೂ ನಿಮ್ಮಪ್ಪಣೆ !
ನಿಮ್ಮದು ದೇಶಾಚಾರ
ನಮ್ಮದೊ ವಿಶ್ವಾಚಾರ.
ದೇಶಕು ಕಾಲಕು ಹೆಚ್ಚು
ಇಸ್ಲಾಂಮತದೀ ನೆಚ್ಚು.
ನಮಗೆ ನಾವೆ ಶಾಸಕರು
ಗುರುಶಾಸನ ಚಾಲಕರು.
ನಿಮ್ಮವೆಮ್ಮ ಬಂಧಿಸವು
ನಿಮ್ಮತನಕೆ ಹೊಂದಿಸವು.
ಈ ಎಡೆ ಮಿತಜನ ನಾವು
ಪ್ರಭು,
ರಕ್ಷಿಸಬೇಕೈ ತಾವು.

**ದೊರೆ**

ನಾವಿಹುದೇ ಸಂರಕ್ಷಣೆಗೆ.
ನಿಮ್ಮ ಬೇಡಿಕೆಗಳಾವ ಬಗೆ?

ರಾಜಾಖಾ

ಅವಧಾರಿಸಿ, ಖಾವಿಂದ್,
ಈಗಿರುವಂತೆಯೆ ಅಧಿಕಾರ
ಈಗಿರುವಂತೆ ಪುರಸ್ಕಾರ
ನಮ್ಮ ಜನದಿಂದ ಸಭೆಗೆಮ್ಯಾರಿಕೆ
ನಮ್ಮ ನುಡಿಯಿಂದ ಮಕ್ಕಳ ಕಲಿಕೆ
ರಕ್ಷಣ ದಳದೊಳಗವಿುತಸ್ಥಾನ
ಮಸೀದಿ ಮುಂಗಡೆ ಅಖಂಡ ಮೌನ
ಸಂಘಕು ಸರ್ಕಾರದ ಅಭಿಮಾನ
ಮತಾಭಿವೃದ್ಧಿಗೆ ಸಮೃದ್ಧದಾನ—

ವಿಕಟಕವಿ

ಇಂದಿರುವಂತೆಯೆ ಮುಂದೆಯು ಕೂಡ
ಇದಕೂ ಮಿಕ್ಕಿನದೇನೂ ಬೇಡ—
ಅಲ್ಲವೆ ಹಜರತರೇ ?

ದೊರೆ

(ಹುಸಿ ನಗುತ್ತಾ)

ನಮಗೇಸಿದರಿಂ ಪ್ರತ್ಯುಪಯೋಗ?

ರಾಜಾಖಾ

ಶಾಂತಿ, ಸಹವರ್ತನೆ, ಸಹನೆ,
ವಿಶ್ವಪುರಸ್ಕೃತಿ, ಇಸ್ಲಾಂಗಣನೆ.

ಜನನಾಯಕ

ಪ್ರಭು,
ಈ ವ್ಯರ್ಥಾಲಾಪಕೆಯೋ ಆಹ್ವಾನ?
ಆರಿಂದಿವರಿಗೆ ರಕ್ಷಣದಾನ ?

ನಾಡಿನವರ ಸೌಹಾರ್ದವ ಗಳಿಸಿ
ನಲ್ಮೆಯ ಮೆರೆಸುತ ಸತ್‌ಪ್ರಜೆ ಎನಿಸಿ
ಎಲ್ಲರ ಮೇಲ್ಮೆಗು ತಾವಿಂಬಾಗೆ
ಪ್ರಗತಿಪಥದಿ ಸನ್ಮತಿಯೊಳು ಸಾಗೆ
ಆಗೆಲ್ಲರ ಗೌರವಕೂ ಸಂದು
ಮೆರೆವರಿವರು ನಮ್ಮೆಲ್ಲರ ಮುಂದು.
ಬೇರೆ ಎಂದೆ ವಿದ್ವೇಷವ ಕಾರಿ
ಈ ಪರಭಾವನೆ ಮೇರೆಯ ಮೀರೆ
ಇವರನು ಸಂರಕ್ಷಿಪರಾರಿಹರೈ ?

ರಾಜಾಖಾ

ನಿಮ್ಮುಪದೇಶವ ಸಾಕುಮಾಡಿರೈ.
ನಮಗಾರ ರಕ್ಷೆಯೂ ಬೇಕಿಲ್ಲ !
ನಮ್ಮನು ಕಾಪಾಡುವನಲ್ಲ.

ಜನನಾಯಕ

ಧೀರರ ಮಾತಿದು, ಸತ್ಯದ ಮಾತು.
ಕಾಪಾಡುವರಾರಲ್ಲನ ಹೊರತು?
ಎಲ್ಲಾ ತೊಡಕಿನ ಬಿಡುಗಡೆ ಇಲ್ಲಿ.
ಇಂತು ನಿಲ್ಲಿರೈ ಭಯವನು ಚೆಲ್ಲಿ

ರಾಜಾಖಾ

ಬುರುಡೆ ಇಲ್ಲದೆಯೆ ಬರುವೆವೆ ಬಮುಕಿ
ನಾವೀ ಜನತೆಯ ಕಡಲೊಳು ಧುಮುಕಿ ?

ಪ್ರಧಾನಿ

ನಾಯಕರೇ,
ಪ್ರತ್ಯೇಕತೆಯನು ಬಯಸುವರೀ ಜನ.
ಇದನೊಪ್ಪಲು ನಮಗೇನಹುದೂನ ?

ಜನನಾಯಕ

ಇನ್ನು ಮುನ್ನ ಇದನೊಪ್ಪದು ಜನತೆ.
ಪೌರಜೀವನದ ಜೀವವೆ ಸಮತೆ.
ಕೋಮಿನ ದಾಕ್ಷಿಣ್ಯತೆ ವಿಷವದಕೆ.

ವಿಕಟಕವಿ

ಕೊನೆಗೂ ಬಂದೆವು ಮೊದಲ ತಾಣಕೇ!

ದೊರೆ

ನಾವೀ ತೊಡಕನು ಬಿಡಿಸುವುದೆಂತು?
ಅಮಿತಗಾಮಿ ಪ್ರತಿಗಾಮಿಗಳಿಂತು
ಒಬ್ಬರ ವೇಗವನೊಬ್ಬರು ತಡೆಯೆ
ಅನಿವಾರ್ಯವು ನಮಗೀ ನಿಲುಗಡೆಯೇ.

ಜನನಾಯಕ

(ಅಸಮಾಧಾನವನ್ನು ಸೂಚಿಸುತ್ತಾ)
ಹರಿಗೆಮ್ಮನು ಪರಿಕಿಪುದೇ ಇಚ್ಛೆ.
ಅಂತೆ ಆಗಲಿನ್ನೇತಕೆ ಚರ್ಚೆ?
ಇನ್ನೆಮ್ಮನು ಬೀಳ್ಕೊಡಿ, ಪ್ರಭುವರ್ಯ.

ವಿಕಟಕವಿ

ಇನ್ನೀ ಸತ್ಯಾಗ್ರಹವನಿವಾರ್ಯ!

ರಾಜಾಖಾ

ಖಾವಿಂದ್,
ಪ್ರಭುಕಾರ್ಯದಿ ಸಹಕರಿಪೆವು ನಾವು.

ದೊರೆ

ನಾಯಕರೇ,
ತಮ್ಮೊಳಿಮಗೆ ಬಹು ಗೌರವವಿಹುದು

ಆದೊಡೀಗ ನಮಗೇನೂ ತೋಚದು.
ತಾಳ್ಮೆಯೊಳಾಲೋಚಿಸಿ, ಆ ಬಳಿಕ
ನಮ್ಮಭಿಮತವನು ಪ್ರಕಟಿಪ ತನಕ
ತಾವಿಬ್ಬರು ಸೌಹಾರ್ದದಿ ಕೂಡಿರಿ;
ಶಾಂತಿಯ ಪಾಲಿಸೆ ಭರವಸೆ ನೀಡಿರಿ.

ಜನನಾಯಕ

ರಾಜಕೀಯದೊಳು, ಸಹಜ, ಸ್ಪರ್ಧೆ.
ನಮಗಿಲ್ಲವು ಶಾಂತಿಯೊಳಶ್ರದ್ಧೆ.

ರಾಜಾಖ್ಯಾರ್

ನಮಗೂ ನಾಯಕರೊಳು ಬಹುಗೌರವ.
ಶಾಂತಿಗೆ ನೀಡುವೆವೈ ಸಹಕಾರವ.

(ಎಂದು ನಾಯಕರಿಬ್ಬರೂ ಒಬ್ಬರ ಕೈ ಒಬ್ಬರು ಕುಲುಕುವರು. ಆಮೇಲೆ ದೊರೆಗೆ ವಂದಿಸಿ ಹೊರಡುವರು. ಪ್ರಧಾನಿ ಅವರನ್ನು ಬೀಳ್ಕೊಟ್ಟು ಕಳುಹಿಸಲು ಅವರೊಂದಿಗೆ ತಾನೂ ಹೋಗುವನು. ಅವರು ಹೋದಮೇಲೆ, ಅವರನ್ನು ನೋಡುವಂತೆ ನಟಿಸಿ,)

ವಿಕಟಕವಿ

ಇವರು ಹೊರಟರೈ; ಮೂಡಣ ಮುಖಕೆ
ಅವರಾದರಯ್ಯ ಪಶ್ಚಿಮ ಮುಖಕೆ.
ಅಂತೂ, ಎಂದೂ, ಅಲ್ಲೊ ಇಲ್ಲೋ
ಇವರಿಗೆ ತಪ್ಪದು ಸಮ್ಮುಖತೆ.

ದೊರೆ

ಸದ್ಯಕ್ಕೀ ವಿರಸತೆಯೇ ಕೊರತೆ !
ಅದಿರಲಿ ವಿಕಟ,
ಇವರಿಗೇಕೆ ಈ ತೆರ ಮತಲೋಭ ?

**ವಿಕಟಕವಿ**

ಪ್ರಭು, ಇಂದದರಿಂದಿವರಿಗೆ ಲಾಭ.

**ದೊರೆ**

ನಾವು ಕೈಬಿಡಲು ಮುಳುಗುವರಿವರು.

**ವಿಕಟಕವಿ**

ಭ್ರಾಂತಿ, ಪ್ರಭು, ಭ್ರಾಂತಿ.
ತಮ್ಮಿಚ್ಛೆಗೆ ಮುಳುಗುವರೇ ಇವರು?
ತೇಲ ಬಲ್ಲ ಜನ, ತೇಲಿಗರಿವರು.
ಮ್ಲೇಚ್ಛರ ಕಾಲದೊಳೂ ತೇಲಿದರು
ಕಾಂಗ್ರೆಸ್ ಕಾಲದೊಳೂ ತೇಲುವರು.
ತಮ್ಮಿಂದಿವರಿಗೆ ಈ ಮೊಂಡುತನ
ಅದು ತಪ್ಪಲು ತೋರ್ಪುದು ಬೆಂಡುತನ!

**ದೊರೆ**

(ನಗುತ್ತಾ)

ದಿಟ, ವಿಕಟ, ನಿನ್ನದು ಸಿರಿತಮತಿ.
ಆದೊಡೆ, ಮತ್ತೊಬ್ಬನದೂ ಬಲು ಅತಿ.

**ವಿಕಟಕವಿ**

ಅವರ ನೆಚ್ಚುವುದೆ ಸನ್ಮತಿ, ಒಡೆಯ.

**ದೊರೆ**

ದೊರೆತನವನೆ ಬಿಟ್ಟೋಡಿ ಎಂಬೆಯಾ?

**ವಿಕಟಕವಿ**

ಈಗ ತಾವು ಹ್ಹೊಗೊಡುವಿರಿ ಯಾರಿಗೆ?
ಲಂಗುಲಗಾಮಿಲ್ಲದ ಕೆಲ ಮಂದಿಗೆ.

ಆಗ ತಾವು ಹ್ಞೂಗೊಡುವುದು ಯಾರಿಗೆ?
ಹಲವುಮಂದಿಯ ಕಡಿವಾಣದ ಕೆಲಮಂದಿಗೆ.
ಇದರೊಳಗೇನಿದೆ ಪ್ರಭು ನಷ್ಟ ?

ದೊರೆ

ನಿನಗತಿಸರಳವೊ ನಮ್ಗೀ ಕಷ್ಟ !

ವಿಕಟಕವಿ

ಪ್ರಭು ತಮ್ಮ ಚಿತ್ತ, ತಮ್ಮಿಷ್ಟ.

(ಪ್ರಧಾನಿ ನಾಯಕರನ್ನು ಬೀಳ್ಕೊಟ್ಟು ಹಿಂದಿರುಗಿ ಬರುವನು.)

ದೊರೆ

ಅಮಾತ್ಯವರ್ಯರೇ ಈ ಹದವೇನು ?
ಎಂತೆಣಿಸಿಹರೀ ಪರಿಸ್ಥಿತಿಯನು ?

ಪ್ರಧಾನಿ

ವಿಷಮವೆಂದೆ ಬಗೆವೆನು ಮಹಾಪ್ರಭು.

ದೊರೆ

ಎಂತೀ ವಿಷಮತೆ ?

ಪ್ರಧಾನಿ

ಇವರಿಗೊಲಿಯೆ ಅನಾಯಕತೆ
ಅವರಿಗೊಲಿಯೆ ನಿರಂಕುಶತೆ
ಅಂತು ಲೋಪ ರಾಜತ್ವಕೆ
ಇಂತು, ಪ್ರಭು, ನನ್ನೆಣಿಕೆ.

ದೊರೆ

ರಾಜಿಯೊಳಿದೆ ನಮ್ಮುಳಿಕೆ—
ಎಂದಲ್ಲವೆ ನಿಮ್ಮರಿಕೆ ?

ಪ್ರಧಾನಿ

ಆಹುದು ಪ್ರಭು.

ದೊರೆ

ಇದುವೇ ನಮ್ಮಭಿಮತವೈ
ನಿನ್ನದೇನು ಸಲಹೆ ವಿಕಟ?

ವಿಕಟಕವಿ

"ರಾಜಿಯಿಂದ ರಾಜ್ಯಭಾರ"
ಸೈ ಸೈ ಈ ಘೋಷಣೆ ನನಗೊಪ್ಪಿದೆ ಪೂರ.
ಆದರೆ?

ದೊರೆ

ಹ್ಞೂ.

ವಿಕಟಕವಿ

ಯಾರೊಡನೇತರವೀ ರಾಜಿ
ಇದಕಾವನು ಕಾಜಿ?

ದೊರೆ

ಪ್ರಧಾನಿಗಳೇ ಇದಕೇನುತ್ತರ?

ಪ್ರಧಾನಿ

ದಿಲ್ಲಿಯೊಳೇನಹುದೋ ನಿರುಕಿಸುವ
ಬಲಾಬಲಗಳನು ಪರಿಕಿಸುವ.

ವಿಕಟಕವಿ

ಗೆದ್ದವರೊಡನೆಯೆ ರಾಜಿ
ಕಾಲವೆ ಕಾಜಿ?

ಪ್ರಧಾನಿ

(ನಗುತ್ತಾ)

ಇವರೀ ಸೂತ್ರವೆ ಸರಿ ಇಂದು---
ಆದೊಡೆ ರೆಸಿಡೆಂಟ್....

ದೊರೆ

ರೆಸಿಡೆಂಟ್ !

ಪ್ರಧಾನಿ

ಇಕೊ ಆತನ ಮತಸೂಚಕ ಪತ್ರ.

(ಪತ್ರವನ್ನು ಕೊಡ ಹೋಗುವನು.)

ದೊರೆ

(ಬಲು ಕೋಪದ ತಾಳ್ಮೆಯನ್ನು ತೋರಿಸುತ್ತ)

ಪ್ರಧಾನಿ, ನಮ್ಮೊಡನಾಲೋಚಿಸ ಮುಂಚೆಯೆ
ಅವನೊಡನಭಿಸಂಧಿಯೆ ನಿಮಗೆ?

ಪ್ರಧಾನಿ

(ದಿಗಿಲಿನಿಂದ)

ಇಲ್ಲ ಮಹಾಪ್ರಭು, ಇಲ್ಲ ಮಹಾಪ್ರಭು,
ಕೇಳುತವರು ಭೇಟಿಯ ಸುದ್ದಿಯನು
ತಾವೇ ಕಳುಹಿದರೀ ಪತ್ರವನು.

ದೊರೆ

(ಪ್ರಧಾನಿಯ ಕೈಯಿಂದ ಪತ್ರವನ್ನು ಕಿತ್ತುಕೊಂಡು ಹರಿದುಹಾಕುತ್ತಾ),

ಎಲ್ಲಕು ಕೈಹಾಕುವುದೇ ರೂಢಿ!
ಸಾಕಾದೆವು ಸೋಬಾನೆಯ ಹಾಡಿ
ರೆಸಿಡೆಂಟ್ ರೆಸಿಡೆಂಟ್ ರೆಸಿಡೆಂಟ್
ಸೈನಿಗು ರೆಸಿಡೆಂಟ್ ಸೀನಿಗು ರೆಸಿಡೆಂಟ್

(ಕಾಗದದ ಕೊನೆಯ ಚೂರನ್ನು ಎಸೆದು)

ಇಂದಾಯ್ತೆಮಗೀ ಶಾಪವಿಮೋಚನೆ
ಇನ್ನೆಮಗಾಯಿತು ನಮ್ಮಾಲೋಚನೆ.

ಸಜ್ಜನುಗೊಳಿಸಿರಿ ಪಯಣಕೆ ಬೇಗ
ದಿಲ್ಲಿಗೆ ತೆರಳುವುದಭಿಮತವೀಗ.
ಸಿದ್ಧನಾಗು ಪಯಣಕೆ, ವಿಕಟಕವಿ
ತಪ್ಪಿಸಬೇಡವೊ ಸಹವಾಸದ ಸವಿ.
ಬಯಸಿದ ವೇಳೆಗೆ ನೀವೂ ಬನ್ನಿ
ಕಾಂಗ್ರೆಸ್ ನಾಯಕರನು ಕರೆತನ್ನಿ.
ನಮ್ಮೀ ಪ್ರವಾಸ ಗುಟ್ಟನೊಳಿರಲಿ.
ತನ್ನ ಕಿವಿಯ ತಾ ತಿರಿಚಿಕೊಳ್ಳುತ
ಆ ಶ್ವೇತಮಹಾಶಯನಿಲ್ಲಿರಲಿ.
(ದೊರೆ ಹೋಗುವನು.)

ಪ್ರಧಾನಿ

ಮಿತ್ರ, ಇದೆಲ್ಲಾ ನಿನ್ನ ಮಹತ್ತು
ರಾಜ್ಯರಥಕೆ ನೀನೇ ಬಲ್ಲೆತ್ತು.

ವಿಕಟಕವಿ

ಇಂತಿಲ್ಲೀ ಪರಿ, ಅಮಾತ್ಯವರ್ಯ
ರೆಸಿಡೆಂಟೇ ನಮಗಾದನು ಮಿತ್ರ
ಅಸಾಧ್ಯಸಾಧಕವಾಯಿತು ಪತ್ರ!

ಪ್ರಧಾನಿ

ಅಹುದಹುದು,
ಸುಮ್ಮನಿರದೆ ಏತಕೆ ತೋರಿದೆನೋ.
ಆದರಿಂ ಪದವಿಯನೇ ನೀಗುವೆನೋ?
(ಹೊರಡುವರು.)

[ತೆರೆ]

(ಉಪನ್ಯಾಸಾಂಕವು ಮುಗಿಯಿತು)

## ಸಂನ್ಯಾಸಾಂಕ

### ೧೯೪೭

### ವಿಷ್ಕಂಭ

(ಆಸ್ಥಾನಕವಿ ಸುವೇಷದಿಂದ ಬರುತ್ತಾನೆ.)

**ಆಸ್ಥಾನ ಕವಿ**

ನಾನಾರು ಎನ್ನುವಿರ? ವಿಕಟಕವಿ ಮಿತ್ರ!
ಎನ್ನ ಕಾವ್ಯದ ರಚನೆಗಾತನೇ ಸೂತ್ರ.
ಆಸ್ಥಾನಕವಿ ನಾನು ಅಪರಿಚಿತನಲ್ಲ
ಹಿಂದೆ ಕೇಳಿಹಿರೆನ್ನ ಶಾರದೆಯ ಸೊಲ್ಲ.
ನನ್ನನೀ ವಿಕಟಕವಿ ಸುಮ್ಮನಿರಗೊಡನು
ನಿಮ್ಮನಿದುರಿಸೆ ಇಂತು ಮುಂದೆ ದೂಡಿಹನು.
ಅವನೀಗ ಮುಖ್ಯನೀ ದೊರೆಯ ಸನಿಯದೊಳು.
ಅವನ ಮಾತನು ಮೀರೆ ನನಗೀಗ ದಿಗಿಲು.
ಎಂಥವರಿಗೆಂಥೆಂಥ ಪದವಿ ಕಾದಿಹುದೊ
ಗ್ರಹಚಾರವೊದಗಿ ಬರೆ ಆರಿಗೇನಹುದೊ !
ಗೆದ್ದ ಬ್ರಿಟಿಷರಿಗೇಕೆ ಇಂಥ ಸಂನ್ಯಾಸ?
ಸಂನ್ಯಾಸಿಗೇತಕೀ ರಾಜ್ಯಹವ್ಯಾಸ?
ಅಲ್ಲೆರಡು ಪಕ್ಷಗಳು ಇಲ್ಲೆರಡು ಪಕ್ಷ!
ಇವರಿಗಾಸರೆಯಂತೆ ಬೆಳೆವ ವಿಷವೃಕ್ಷ.
ಮುಳುಗುತಿರುವಾಂಗ್ಲರವಿ ಎಂಥ ಕರಿನೆರಳ
ಚೆಲ್ಲಿಹನು ಸಂತನೆಡೆ—ನೆಲಕದುವೆ ಗರಳ.
ರವಿ ಮುಳುಗುತಿರುವಂತೆ ನಿಡಿದಪ್ಪುದಿದುವು
ಬಲಿ ತುಳಿದ ವಿಕ್ರಮನ ವಿಪರೀತವಿದುವು.
ಎಲ್ಲ ಧ್ಯೇಯಕು ಇಹುದೊ ಅದರ ಪಡಿಛಾಯೆ?
ಬೆಳಕಿನಲ್ಲಿಯೆ ಕುದುರುವಿದು ಎಂಥ ಮಾಯೆ!

ದೇಶಭಕ್ತಿಯ ನೆರಳು ಮತವಾಗಬೇಕೆ?
ನಮ್ಮಾತ್ಮ ಹನುಮನನು ಇದು ತುಡುಕಲೇಕೆ?
ಆವ ದೇಶದ ಹುಚ್ಚು ಆವ ದೇಶಕ್ಕೆ?
ಆವ ಕಾಲದ ನೆಚ್ಚು ಆವ ಕಾಲಕ್ಕೆ?
ಆಂಗ್ಲ ಜನಕೀಗಿಲ್ಲ ನಾಡಾಳುವಾಸೆ
ಇಹುದು ನಾವಾಳುತ್ತ ಫಲವುಣಿಸುವಾಸೆ.
ಗುತ್ತಿಗೆಯ ಗಿಟ್ಟಸರು ಗಾಂಧಿ ಜನರಾಳಿ
ಎಲ್ಲ ತಮಗೆಂಬರು ಇಂದಿಲ್ಲ ನಾಳೆ.
ತೊಲಗಿದರೆ ಸಾಕೆಂಬ ಗೀಳು ಕಾಂಗ್ರೆಸಿಗೆ.
ಎಲ್ಲ ಇತ್ತುಣುವುದೇನೆಂದು ಆಂಗ್ಲರಿಗೆ.
ಈ ಎರಡು ಬಯಕೆಗಳ ಜಾಡ ಹಿಡಿಯುತ್ತ
ಸ್ವಾರ್ಥಸಾಧನೆಗಾಗಿ ಮುಸ್ಲಿಮರ ಚಿತ್ತ
ಹವಣಿಸಿದೆ ಭಾರತವನೊಡೆದು ಬಾಳಲ್ಕೆ:
ನೆಲೆಗಾಣದೊಂದು ಜನ ನೆಲೆಯ ಕಾಣಲ್ಕೆ.
ಅಣುವೊಡೆದೊಡೇ ಸಾಕು ಪ್ರಳಯವಪ್ಪುದಲ
ಮನವೊಡೆದೊಡೇವೇಳ್ವೆ—ಮಾನವತೆ ವಿಫಲ!
ದೇವನೋ ದೈತ್ಯನೊ ಯಾರು ಈ ಜಿನ್ನ?
ಕರ್ಣ ಕೈಬಿಟ್ಟ ಆ ಸರ್ಪವೇನಣ್ಣ?
ಹಿಂದುವೂ ಅಲ್ಲ ಇವ ಮುಸ್ಲಿಮನು ಅಲ್ಲ
ಆವ ದೈವದ ಭಕ್ತ ದೇವನೇ ಬಲ್ಲ.
ಭಾರತ ಯುರೇನಿಯುಂಗಿವನೆ ನ್ಯೂಟ್ರಾನು.
ಅವರೊಡೆದರಿವನಿಂದ ನಾಡ ಹೃದಯವನು.
ಈ ಒಡೆತದೆದೆತಾಪವಾರ ಸೋಕಿಲ್ಲ?
ಏಕಾಂತವಾಸಿ ನಾನೆನಗು ತಪ್ಪಿಲ್ಲ.
ವೇದ ಹುಟ್ಟಿದ ನಾಡು ಕಾಡ ಪಾಲಾಯ್ತು.
ಹೆಸರಾಂತ ತಕ್ಷಶಿಲೆ ತಕ್ಷಕನಿಗಾಯ್ತು.
ಆಗಬಾರದು ಆಯಿತಿನ್ನೇಕೆ ಮಾತು?

ಉಳಿದುದನು ರೂಢಿಸುವ, ಹೋದುವನು ಹೂತು.
ಇನ್ನು ನನಗಿಲ್ಲವಾ ಒಂದೆಂಬ ಕವನ
ಆಯಿತ್ತೈ ಭೇದಾಗ್ನಿಯೊಳಗದರ ಹವನ.
ಸುಟ್ಟು, ಕರಿಕಾಯ್ತಣ್ಣ ಆ ಉದರಕವಿತೆ
ಗಮುಕಿಗುಳಿಯಿತೊ ಏನೋ ಸ್ವಲ್ಪವಾ ಕೊರತೆ.
ಮಂದಮಾರುತ ಮಧುರಪಕ್ಷಿ ಸಂಗೀತ
ಕಣಿವೆ ಬನ ಮಲೆ ಸರಸಿ ಭಾರ್ಗವಸ್ರೋತ
ವೀಣೆ ಮದ್ದಳೆ ಕೊಳಲು ಗಾಯಕಿಯ ಕೊರಳು
ಏಣಾಕ್ಷಿ ಕುರುಳಿನೊಡನಾಡುತಿಹ ಬೆರಳು---
ಇನ್ನು ಮೇಲಿಂಥವನೆ ಕುರಿತೆನ್ನ ಪದ್ಯ.
ರಾಜಕೀಯದ ಕಾಟ ತಪ್ಪಿತಲ ಸದ್ಯ!
ಆದೊಡೆನುವಂತಿಲ್ಲ ಇದು ತಪ್ಪಿತೆಂದು
ವಿಕಟಮಿತ್ರನ ಇಚ್ಛೆಗೆನ್ನ ಕಲೆ ಬಂಧು.
"ಬಂದಿ" ಎಂದರು ಸರಿಯೆ—ನಾನವನ ವಂದಿ
ನಿಶಿತಮತಿ ಸಂಸ್ಕೃತನು ನಾನಿವನನೊಂದಿ
ಜೀವಿಸುತ್ತಿಹೆನಲ್ಲ—ಎಂತೇಕೋ ಕಾಣೆ.
ಏನು ಮಹಿಮೆಯೊ ಇವನದರಿಯೆನೆನ್ನಾಣೆ.
ದೊರೆಯ ಕವಿ ಇವಗಾಯ್ತು ಹಿರಿಪದವಿಯಾಯ್ತು
ದೇಶಭಕ್ತರ ಮೆಚ್ಚು ಸನ್ಮಾನವಾಯ್ತು.
ರಾಜರಾಜರ ಹಿಡಿದು ಕೂರಿಸಿಹನಂತೆ
ಕಡುಕಷ್ಟದೀ ಸೇರ್ವೆಗಿವನೆ ಆಳಂತೆ.
ತೆರೆಮರೆಯ ಮಾತೆಲ್ಲ ಈತನದೆ ಅಂತೆ.
ಇಂತಲ್ಲಿ ನಡೆಯುತಿದೆ ಮಾತುಗಳ ಸಂತೆ.
ನಮಗುಳಿದ ಭಾರತದ ಆಡಳಿತದಲ್ಲಿ
ರಾಜರಿಗು ಮೇಲ್ ಪಾಲನೊಪ್ಪಿಹುದೆ ದಿಲ್ಲಿ?
ತನ್ನ ದೇಶಕೆ ರಾಜ ಅಲ್ಲು ಅಧಿರಾಜ—
ಇಂತು ಸಂಧಾನಗಳನೀ ಹಾಸ್ಯರಾಜ

ನಡೆಸುತ್ತಲಿಹನಂತೆ— ಏನಿವನ ಜೋಕು!
ಪ್ರಕೃತಿಶಕ್ತಿಯ ಮುಕ್ತಿಗಿಂಥ ತಡೆಬೇಕು.
ಪ್ರಜೆಯನೇ ನೆಚ್ಚಿದೊಡೆ ಪ್ರಜೆಗೆ ಲೇಸೆಲ್ಲಿ?
ಪ್ರಭುಗಳನೆ ನೆಚ್ಚಿದೊಡೆ ಪ್ರಭುಗು ಲೇಸೆಲ್ಲಿ?
ಪ್ರಜೆಯಾತ್ಮ ನಡೆಯುಡುಗಿ ಕೊಳೆಯುತಿರಬೇಕೆ?
ಸಿರಿಯ ಕೊಳೆಪಾಚೆಯೊಲು ದೊರೆ ತೇಲಬೇಕೆ?
ಕೂಲದಂತಿರಬೇಕು ಕುಲವುಳ್ಳ ಅರಸು
ಪ್ರಜೆಯ ನಡೆಗನುಕೂಲನಾಗಿ ನಯಬೆರಸು.
ಅವರ ನಡೆಗಿವನ ತಡೆ—ಆಗ ಋಜುಗಮನ.
ಧ್ಯೇಯಕ್ಕೆ ಸ್ಥೈರ್ಯವಿರೆ ಪ್ರಗತಿಗೂ ಗಮನ.
ಪರರು ಬಿಟ್ಟರು ನಮ್ಮ ಜ್ವರ ಬಿಡುವ ತೆರದಿ.
ಪಥ್ಯವಿರಬೇಕಣ್ಣ ಈಗಳೆಚ್ಚರದಿ.
ನೆಟ್ಟ ಕೂರಸಿಯನ್ನು ಹೊರಗೆಳೆದೆವಿಂದು
ರಕ್ತ ಹರಿದರು ಜೀವ ಉಳಿವುದೋ ಎಂದು
ಎಂತಾದರೂ ನೋವು ಕಡೆಗಾಣಲೆಂದು
ವಿಕಲಾಂಗವಾದರೂ ಅದುವೆ ಲೇಸೆಂದು.
ಈ ಗಾಯ ಮಾಗಲ್ಕೆ ನಿಡುಕಾಲ ಬೇಕು,
ನಮ್ಮೆಲ್ಲರೊಮ್ಮತದ ಸಹಕಾರ ಬೇಕು.
ಒಂದು ಶಾಪವು ಕಳೆಯಿತಿನ್ನೊಂದು ಶಾಪ
ನಮಗೆ ತಟ್ಟದೆ ಇರಲಿ—ಹಾಕದಿರಿ ಧೂಪ
ಮತವಳರ ಕೋಪಕ್ಕೆ—ತೋರಿರನುತಾಪ.
ಈ ನಾಡಿನೈಸಿರಿಗೆ ಹೊರತಿವರು ಪಾಪ!
ಮಣಿವೆಸೀ ಕೇಡಿಂದ ನನ್ನ ಕಾಪಿಟ್ಟ
ಎನ್ನ ವಂಶದ ಜನಕೆ; ಪರತನವು ಕಷ್ಟ.
ರೀತಿ ಹೇಳಲು ಹೊರಟು ನೀತಿ ಮೊದಲಾಯ್ತು.
ಎಂದೆನ್ನ ಬೈಯದಿರಿ. ದಿಟ ಹೊತ್ತು ಆಯ್ತು.
ಕವಿಗೆ ಬಂದಿಹ ರೂಢಿ. ಇಂಥ ಸಲಹೆಯನು

ವಿಕಟಕವಿ ನನ್ನಿಂದ ಸಂಗ್ರಹಿಸುತಿಹನು.
ಇವುಗಳನು ಸಮಯಕ್ಕೆ ತಕ್ಕಂತೆ ಬಳಸಿ
ಅದ್ದೂರಿಯಲ್ಲಿಹನು ಬಲು ಹೆಸರ ಗಳಿಸಿ.
ಜನಕೆ ನಾ ಬೇಕಿಲ್ಲ, ದೊರೆ ಮೆಚ್ಚನೆನ್ನ.
ಆವನೂಟಕೊ ಆಪನಟ್ಟಿರುವ ಅನ್ನ.
ಮಾತಿನೊಳು ನಾ ಜಾಣ, ಹೂಟದೊಳಗವನು
ನಾ ಬಿಲ್ಲು ಅವ ಬಾಣ— ಬಲು ಧೀರನವನು.
ನಾ ಹೇಳಿ ಅವ ಹೇಳಿ ದೊರೆ ಪ್ರಗತಿಶೀಲ.
ನಾನೆ ಹೇಳಲು ಏತಕಾವನೂ ಕೇಳ ?
ನಾನು ಬರಿ ಕರಡಾದೆ, ಅವನೆ ರುಜುವಾದ
ಏಕಾಂತದಲ್ಲಿಯೇ ಆಯ್ತೆನ್ನ ವಾದ
ಇಗೋ, ಮುಸ್ಲಿಮಜನಕೆ ದೊರೆಯ ಪರವಾನೆ
ನಾನೆ ಬರೆದುದು, ವಿಕಟ ಮೆಚ್ಚಿದನು ಶಾನೆ.
ನಿನ್ನೆ ಬಂದನು ಆತ ನವದಿಲ್ಲಿಯಿಂದ
ಬಹಳ ವಹಿವಾಟುಗಳ ನಡೆಸಿ ಗೆಲುವಿಂದ.
ರೆಸಿಡೆಂಟನಧಿಕಾರವನು ಬಿಟ್ಟನಣ್ಣ.
ಎಂತು ಬದಲಾಯಿಸಿತು ಬಿಳಿಯವರ ಬಣ್ಣ !
ನವರಾತ್ರಿ ನವಮಿ ದಿನ ಮನಕೆ ಮುಳ್ಳೂರಿ
ಇನ್ನು ಸಜ್ಜೆಗೆ ಬಾರನೀ ಬಹದ್ದೂರಿ.
ಇದಕು ಮಿಗಿಲೇನುಂಟು ಶಂಕರಿಯ ಕರುಣೆ !

(ತೆರೆಯಲ್ಲಿ)

ನೋಡಿದೆಯಾ ಸಖ ಈ ಪರವಾನೆ.

ಕವಿ

ಆದೊಡೀ ಮುಸ್ಲಿಮರಿಗೇಕಿಂಥ ಬವಣೆ ?

(ಹೋಗುವನು)

## ದೃಶ್ಯ ೧

(ರೆಸಿಡೆನ್ಸಿಗೆ ಹೋಗುವ ಹಾದಿ. ಮುಸ್ಲಿಂ ನಾಯಕ ಶಾಜಾಖಾ
ಮತ್ತು ಮುಸ್ಲಿಂ ಹಿರಿಯ ರಾಜಾಖಾ ಇವರು ಪ್ರವೇಶಿಸುತ್ತಾರೆ.)

**ರಾಜಾಖಾ**

ನೋಡಿದೆಯಾ ಸಖ, ಈ ಪರವಾನೆ.
ಈ ಹಿಂದೂ ಜನ ಹೆಚ್ಚಿದೆ ಶಾನೆ.
ಇಳಿಸಬೇಕೆ ನಾವೆಮ್ಮ ನಿಶಾನೆ?
ಇವರಿಗೆ ಹತ್ತಿದೆ ಗರ್ವದ ಬೇನೆ!

**ಶಾಜಾಖಾ**

ಏಕೀ ದುಗುಡ, ಏನೀ ಸುದ್ದಿ

**ರಾಜಾಖಾ**

ಇಗೊ ನೋಡೀ ರಾಜನ ದುರ್ಬುದ್ಧಿ!
"ನೀವೀ ರಾಜ್ಯದ ಪ್ರಜೆಗಳೊ ಅಲ್ಲವೊ
ನಾಡಿನವರಂತೆ ಇರುವಿರೊ ಇಲ್ಲವೊ
ಗಣಿಸಬೇಕೆ ಪರನಾಡವರೆನುತ?
ಆಲೋಚಿಸಿ ಹೇಳಿರಿ ನಿಮ್ಮ ಹಿತ.
ಪ್ರಜೆ ಎನೆ ಎಲ್ಲಾ ಹಕ್ಕುಗಳುಂಟು,
"ಪರ" ಎನೆ ಹಿತಗಳ ರಕ್ಷಣೆಯುಂಟು.
ನಾಡನು ಬಿಡೆ ಬಯಸುವಿರೋ ಹೇಳಿ
ಸ್ವತ್ತಿಗೆ ತಕ್ಕ ರಿಯಾಯಿತಿ ಕೇಳಿ"—
ನಾವೇಕೀ ನಾಡನು ಬಿಡಬೇಕು
ನೋಡಿದೆಯಾ ಈ ರಾಜನ ಜೋಕು!
ಅವರಾ ನಾಯಕನೀಗ ಪ್ರಧಾನಿ
ಅವನದೆ ಜೋರು ಅವನದೆ ವಾಣಿ.

**ಶಾಜಾಖಾ**

ಇದರೊಳು ನನಗೇನೂ ಕಾಣದು ದೋಷ.

ನಿಮ್ಮದಿಯೊಳು ನಾವಿರಲಿದೆ ಅವಕಾಶ.
ಇಲ್ಲೇ ಹುಟ್ಟಿದೆವಿಲ್ಲೇ ಬೆಳೆದೆವು ಇಲ್ಲೇ ಬಾಳಲು ಬೇಕು
"ಪರಪರ" ಎನ್ನುತ ಏಸೀ ನಿನ್ನಯ ಕಾಕು ?

ರಾಜಾಖಾ

ಮೊದಲೀ ದೇಶದವ, ಆಮೇಲೆ ಪರ
ಹಿಂದೂ ಮುಸ್ಲಿಮರಾದೆಮಗಿದುವೆ ತರ.
ಅವರಿಂದೆಮಗೂ ಹಿಂದುವಿನಂತೆಯೆ ಬೇಕೆಲ್ಲದರೊಳು ಸಮಪಾಲ
ಮೇಲಿನ ಮುಸ್ಲಿಂತನಕೋ. ಕೊಸರನು ಕೇಳು—
ಆತನಿಗೊಂದೇ ಆದರೆ ನಮಗೊಂದೂ ಕಾಲು.
ಒಪ್ಪಿದರೊಪ್ಪಲಿ—ಇಲ್ಲವೊ ಎಲ್ಲಾ ಹಾಳು.

ರಾಜಾಖಾ
(ನಗುತ್ತಾ)

ಬಲು ಚೆನ್ನಾಗಿದೆ ತರ್ಕ !
ಮೊದಲೀ ನಾಡವರೆಂದೊಪ್ಪೋಣ.
ಆ ಬಳಿಕೆಮ್ಮಯ ಹೆಚ್ಚಿನ ಹಿತಗಳ ಕೇಳೋಣ.
ಈ ನಡೆವಳಿಕೆಯೆ ಸಾಧು
ಆಮೇಲಿದ್ದೇ ಇದೆ ಫಿರ್ಯಾದು.

ರಾಜಾಖಾ

ಈಗಳೆ ಫಿರ್ಯಾದು—ಈಗಳೆ ಮೂರು.
ಸೂರೆಯಾದಮೇಲೆ ನಮ್ಮೂರು
ಅಗಳಿಗೆ ಬಿಡುವರೆ ನೀರು ?
ನಮಗೂ ಈ ಸಾಹೇಬನಿಗೂ ನೇಹವಿದೆ
ಇನ್ನೂ ಇವನಿಗೆ ರಾಜ್ಯದ ಮೋಹವಿದೆ
ಬಾ ಅಲ್ಲಿಗೆ ಹೋಗೋಣ.
ಅವನ ಸಹಾಯವ ಬೇಡೋಣ.

(ಹೋಗುವರು.)

(ಪಂಡಿತನೊಬ್ಬ ಆವನ ನಂಟನಾದ ಯುವಕನೊಬ್ಬನೊಡನೆ ಬರುವನು.)

ಪಂಡಿತ

ನಿಜವಾಗಿಯು ಈ ದೇಶವ ಬಿಡುವನೆ ಇವನು?
ಮುಂದೆಲ್ಲಿಗೆ ಹೋಗುವನು?

ಯುವಕ

ಎಲ್ಲಿಗೆ, ಮನೆಗೆ!

ಪಂಡಿತ

ಮನೆಗಂತೆ ಮನೆಗೆ—
ಹೋಗೆಲೊ ಕುರುಬ,
ಬೀಳಿಲ್ಲದೆ ಬಾಳುವುದೇ ಕಿರುಬ?

ಯುವಕ

ಈಗರಿತೆನು, ಅದಕೇ ಸಮ್ರಾಟರಿಗಾಫ್ರಿಕ ಯಾತ್ರೆ
ಇನ್ನಾ ಶ್ಯಾಮುಲಜನವೀ ಕ್ಷೇತ್ರರನುಗ್ರಹ ಪಾತ್ರೆ.
ಸದ್ಯಕ್ಕೆಮ್ಮನು ಬಿಟ್ಟರೆ ಸಾಕು—
ಆದೊಡೆ, ತುರುಕರಿಗಿದೆ ಈತನ ಕುಮುಕು.

ಪಂಡಿತ

ಹೋಗುವಗೇತಕೆ ಈ ಚಾಣಕ್ಯನ ಚಮಕು?

ಯುವಕ

ಕಾಂಗ್ರೆಸ್ಸಿನ ಜನಕಿದೆ ತೊಡಕು!

ಪಂಡಿತ

ಓಹೋ ಇದಕೋ ಇವರವರಿಗು ವ್ಯಾಜ್ಯ!
ನಮಗೇನೆರಡೂ ತ್ಯಾಜ್ಯ.
ಅಂತೂ ಇಂತೂ ಕುಂತೀ ಮಕ್ಕಳಿಗಿಲ್ಲೀ ರಾಜ್ಯ.

ಯುವಕ

ಕುಂತೀಸುತರಾರು?

ಪಂಡಿತ

ನಾವೇ — ಮತ್ತಾರು ?
ಮೊದಲಾ ತುರುಕ ಬಳಿಕೀ ಮ್ಲೇಚ್ಛ
ಜೊತೆಗಸ್ಪೃಶ್ಯ-ಎಲ್ಲವು ಸ್ವಚ್ಛ !

ಯುವಕ

ತುರುಕರಾಸೆ ಈ ಸ್ವಚ್ಛಸ್ಥಾನ
ಅವರಿದಕೆಂಬರು ಪಾಕಿಸ್ತಾನ

ಪಂಡಿತ

ಪಾಕಿಸ್ತಾನವೋ ಪತಿತಸ್ಥಾನವೊ ?

ಯುವಕ

ನಿಮ್ಮಾಚರಣೆಗೆ ಖಬರಸ್ತಾನ!

ಪಂಡಿತ

ಗಾಂಧಿಗಿಂತ ಇವನೆಷ್ಟೋ ಮೇಲು
ಅವ ಮುಟ್ಟಿದ್ದೆಲ್ಲವು ಹಾಳು
ಇಲ್ಲವೆ ಗೋಳು.
ಜಾತಿಗಳೆಲ್ಲವ ಬೆರಕೆ ಮಾಡಿದ
ಶಿಷ್ಟಾಚಾರದ ಹುಟ್ಟಡಗಿಸಿದ
ಹುಡುಗರ ಬುದ್ಧಿಯ ಕುಟ್ಟಿ ಕೆಡಹಿದ
ಹೆಂಗಸರೆಲ್ಲರ ಹದ್ದುಗೆಡಿಸಿದ.
ನಾವೂ ಚಂಡಾಲರು ಸಮವಂತೆ
ಹೊಲೆಯರೆಲ್ಲರೂ ಹರಿಜನರಂತೆ !
ಗಂಡೂ ಹೆಣ್ಣೂ ಎಲ್ಲಾ ಒಂದೇ
ಇನ್ನೂ ಏನಹುದೋ ಮುಂದೆ.
ಇವನಿಗಿಂತಲಾ ಶ್ವೇತರೆ ಸಾಧು
ಅವರನಾದರೂ ಮೆಚ್ಚಿಸಬಹುದು.

"ಯಸ್ಮಿನ್ ದೇಶೇ ಪುರೇ ಗ್ರಾಮೇ
ತ್ರೈವಿದ್ಯೇ ನಗರೇಪಿ ವಾ
ಯೋ ಯತ್ರ ವಿಹಿತೋ ಧರ್ಮಃ
ತಂ ಧರ್ಮಂ ನ ವಿಚಾಲಯೇತ್"
ಈ ನೀತಿಯನೀತನು ಪಾಲಿಸಿದ.
ಗಾಂಧಿಯೊ ಎಲ್ಲವ ಜಾಲಿಸಿದ.

**ಯುವಕ**

ದಿಟ, ನಿಮ್ಮಾಚಾರವ ಜಾಲಿಸಿ ತೋರಿದ
ನಮ್ಮೆಲ್ಲರ ತಾಪವನೂ ಕಳೆದ.
ಅವ ಯುಗಪುರುಷ.

**ಪಂಡಿತ**

ಯುಗಪುರುಷನೆ—ಅಯ್ಯೋ—ಕಲಿಪುರುಷ.
ಕುಂಬಾರಗೆ ವರುಷ—ದೊಣ್ಣೆಗೆ ನಿಮಿಷ.
ಎಲ್ಲಾ ಹಾಳು—ನಾವಿರುವುದೆ ಗೋಳು.
ನಮ್ಮರಸರಿಗೂ ಏಕೀ ದುರ್ಬುದ್ಧಿ ?
ಪಂಚಮರೆಲ್ಲರನೂ ಕಾವೇರಿಯೊಳದ್ದಿ
ಶುದ್ಧಿಯ ಮಾಡಿರಿ ಎಂದೆಮ್ಮನೆ ನೇಮಿಸಬಹುದೇ ?
ಕುಲಕಂಟಿದ ಹೊಲೆ ಮೈತೊಳೆದರೆ ಹೋಗುವುದೇ ?
ಗಾಯತ್ರಿಗೆ ಶುದ್ಧಿಯ ಬಲವಿಹುದೋ ಇಲ್ಲವೊ ಹೇಳ
ಇಲ್ಲದೆ ಹೋದರೆ ಕಲಿಯಿರಿ ಪಾದ್ರಿಯ ಕೈಲಿ
ಜ್ಞಾನಸ್ನಾನವಿಧಾನವನೆಂದರಲಾ !
ಪಾದ್ರಿಯೇತಕೆ ? ಮುಲ್ಲನು ಸಹ ಇದ ಬಲ್ಲನಲಾ !
ಇದು ನಮ್ಮ ಪ್ರಾಚೀನ ಕರ್ಮ.
ಇನ್ನೂ ಏನೇನನುಭವಿಸಬೇಕೋ ಈ ಜನ್ಮ !
ಬಾ ಆ ಫೆರಂಗಿ ಹತ್ತಿರಕಾದರು ಹೋಗೋಣ.
ಧರ್ಮವ ಪೊರೆಯೆಂದಾ ಧರ್ಮಾತ್ಮಗೆ ಮೊರೆಯೋಣ.

ಯುವಕ

ಇಗೊ, ನಿಮ್ಮರ್ಜಿ.
ಹೋಗಿರಿ, ಫೆರಂಗಿ ಮುಂಗಡೆ ಆಡಿಸಿರೀ ಭರ್ಜಿ.

ಪಂಡಿತ

ನೀನೂ ಬಾ ಜತೆಗೆ
ಅಬ್ಬ, ಹಿರಿಯರ ಕಂಡರೆ ಏನಲಕ್ಷ್ಯವೋ
ಈಗಿನ ಹುಡುಗರಿಗೆ—
(ಎಳೆದುಕೊಂಡು ಹೋಗುವನು.)

(ಸ್ವಲ್ಪಹೊತ್ತಿನ ಮೇಲೆ ಕಾಂಗ್ರೆಸ್ಸಿನ ಮುಂದಾಳು ಕಾಂಗ್ರೆಸ್ ಸೋಷಿಯಲಿಸ್ಟ್ ಮಿತ್ರನೊಡನೆ ಬರುತ್ತಾನೆ.)

ಕಾಂಗ್ರೆಸ್ ಸೋಷಿಯಲಿಸ್ಟ್

ಉಹು ನಾನಂಬೆನು—ಎಲ್ಲವು ಮೋಸ
ಸುಲಭದಿ ತಪ್ಪದು ಈ ಸಹವಾಸ.

ಕಾಂಗ್ರೆಸ್ ಮುಂದಾಳು

ತೊಲಗೆಂದೆವು, ಆವ ತೊಲಗುವನೆನ್ನೆ
ನಂಬದಿರಲು ನಮ್ಮಾತ್ಮಕೆ ಚೆನ್ನೆ?

ಕಾಂಗ್ರೆಸ್ ಸೋಷಿಯಲಿಸ್ಟ್

ರಾಜ್ಯದ ವಿಷಯದಿ ಆತ್ಮದ ಮಾತು!
ಬಿರುನುಡಿಗಳ ಚಿನಕುರುಳಿಗೆ ಸೋತು
ದೊರೆತನವೊಪ್ಪಿಸೆ ಬಂದನೆ ನಿಮಗೆ?
ಎಲ್ಲ ಕುಟಿಲ, ಸಾಮಾನ್ಯನೆ ಈ ಹಗೆ?

ಕಾಂಗ್ರೆಸ್ ಮುಂದಾಳು

ಬರಿನುಡಿ ಬಿರುನುಡಿಗಳ ಮಾತಲ್ಲ—
ನಮ್ಮ ಬಲವ ತೆಗಳುವುದೂ ಲೇಸಲ್ಲ
ಇವನ ಮೋಹ ಈಗಾವ ಜನಕಿದೆ?
ಆತನ ಮನೆಯೂ ಬಲು ಸೋರುತಿದೆ.

ಕಾಂಗ್ರೆಸ್ ಸೋಷಿಯಲಿಸ್ಟ್
ಮರೆಯಬೇಡ, ನಾವಿವನಿಗೆ ವೈರಿ!

ಕಾಂಗ್ರೆಸ್ ಮುಂದಾಳು
ನೀನರಿಯೆಯು, ಇವ ಬೇಹಾರಿ—
ಇನ್ನಿವಗಿಲ್ಲೀ ದೇಶದಿ ಲಾಭ
ಅದರಿಂ ತೀರಿದೆ ರಾಜ್ಯದ ಲೋಭ.

ಕಾಂಗ್ರೆಸ್ ಸೋಷಿಯಲಿಸ್ಟ್
ಇವನ ಮನವ ಪರಮೇಶ್ವರ ಬಲ್ಲ.
ಇವ ಬಿಡುವವರೆಗು ನಂಬಿಕೆಯಿಲ್ಲ.
ಮುಸ್ಲಿಂಭೂತವನಿವನೆಬ್ಬಿಸಿದ
ಮತಮತ ವೈಷಮ್ಯವ ಹಬ್ಬಿಸಿದ
ಎಲ್ಲಾ ಸಾಮಂತರ ಕೊಬ್ಬಿಸಿದ
ಬಿಡುಗಡೆ ಮಾತೊಳು ನಿಮ್ಮುಬ್ಬಿಸಿದ—
ಜಿಡ್ಡು ಸವರಿದಾ ಮಪ್ಪಳಿಯಂತೆ
ಬಡಿದರು ಸಹಿಸುವಿವಿರಿ ನೀವಿಂತೆ!

ಕಾಂಗ್ರೆಸ್ ಮುಂದಾಳು
ಬಿಡು ಬಿಡು ನಿನ್ನದು ಬಲು ಅತಿರೇಕ
ಈತನ ನಂಬುವುದೀಗ ವಿವೇಕ.

ಕಾಂಗ್ರೆಸ್ ಸೋಷಿಯಲಿಸ್ಟ್
ನಂಬಿರಿ, ನಂಬಿರಿ, ನಿಮಗಿದೆ ಘಾಯಿದೆ
ಹೋಗಲು ಅವಗಿದೆ ಇನ್ನೊವಾಯಿದೆ.
ಹೊರಡುವ ವೇಳೆಗೆ ಈ ಸರದಾರ
ನಾನೂ ತರುವೆನು ಹೂವಿನ ಹಾರ!

ಕಾಂಗ್ರೆಸ್ ಮುಂದಾಳು
ಬಾ ಇಂದೇ ಆತನ ಕಾಣೋಣ
ಬಾ ಬಾ ಷುಕ್ರಿಯ ಹೇಳೋಣ.

**ಕಾಂಗ್ರೆಸ್ ಸೋಷಿಯಲಿಸ್ಟ್**

ಊಃಹು, ನಾನೊಲ್ಲೆ
ನಿಲ್ಲುವೆನಿಲ್ಲೆ.

**ಕಾಂಗ್ರೆಸ್ ಮುಂದಾಳು**

ಬಿನದಕಾದರೂ ಬಾ ಜೊತೆಯಲ್ಲೆ.

(ಹೊರಡುವರು)

[**ತೆರೆ**]

## ದೃಶ್ಯ ೨

**ರೆಸಿಡೆನ್ಸಿ**

(ರೆಸಿಡೆಂಟ್ ಸರ್ ಎಡ್ವರ್ಡ್ಸ್ ಮತ್ತು ಅವರ ಸೆಕ್ರೆಟರಿ ಕರ್ಟೀಸ್)

**ರೆಸಿಡೆಂಟ್**

ರಿಕಾರ್ಡನ್ನೆಲ್ಲವ ಸುಟ್ಟೆಯ, ಕರ್ಟೀಸ್
ಸಾಮಾನೆಲ್ಲವ ಕಟ್ಟಿದೆಯ?
ವಿಮಾನಪಯಣಕೆ ಜಾಗವು ದೊರಕಿತೆ
ಪ್ಯಾಲೇಸಿಗೆ ಚರನಟ್ಟಿದೆಯಾ?

**ಸೆಕ್ರೆಟರಿ**

ಎಲ್ಲಾ ನೆರವೇರಿದೆ, ಸರ್ ಎಡ್ವರ್ಡ್ಸ್.

**ರೆಸಿಡೆಂಟ್**

ನೀ ಸರಿ—ನಾವೋ ಬರಿ ಪಾಸೇಜ್ ಬರ್ಡ್ಸ್!

**ಸೆಕ್ರೆಟರಿ**

ನೀವಿಲ್ಲಿರೆ ಬೇಡೆನ್ನುವರಾರು?

**ರೆಸಿಡೆಂಟ್**

(ನಗುತ್ತಾ)

ಇನ್ನು ನಡೆಯದಿಲ್ಲೆಮ್ಮಯ ಜೋರು.

**ಸೆಕ್ರೆಟರಿ**

ಕುರಿ ಎಂದಿಗು ಕುರಿ; ತೋಳವು ತೋಳ.
ತೊರೆವರೆ ದೇವರಿತ್ತ ಈ ಕೂಳ?

**ರೆಸಿಡೆಂಟ್**

ಖೂಳನಾಗದೀ ಕೂಳು ದೊರೆಯದೈ.

**ಸೆಕ್ರೆಟರಿ**

ಕೀಳುಜನದೊಡನೆ ಖೂಳತನವೆ ಸೈ

ರೆಸಿಡೆಂಟ್

ದೊರೆಯಿತು ಕ್ಲೈವಿನಿಂದಲೀ ರಾಜ್ಯ,
ಭೋಗಿಸಿದೆವು–ಇನ್ನೇತಕೆ ವ್ಯಾಜ್ಯ ?

ಸೆಕ್ರೆಟರಿ

ಬಿಡುವಿರೊ, ಬಿಡಿರಿದ ಕ್ಲೈವಿನ ಜನಕೆ—
ಇದುವೇ ನ್ಯಾಯು, ಇದೆ ನನ್ನರಿಕೆ

ರೆಸಿಡೆಂಟ್

(ನಗುತ್ತಾ)

ದಿಟ, ಒಪ್ಪಿದೆ ಕರ್ಟಿಸ್, ಇದೆ ನ್ಯಾಯ
ನ್ಯಾಯಾಚರಣೆಯೆ ನಮ್ಮ ಧ್ಯೇಯ.
ವ್ಯಕ್ತಿ ವ್ಯಕ್ತಿಗೂ ನೀತಿಯೊಂದಿದೆ
ಆದೊಡೆ ದೇಶಕು ರೀತಿಯೊಂದಿದೆ.
ಎರಡೂ ಹೊಂದಿರುವುದೆ ಶ್ರೇಯಸ್ಸು.
ತೀರುವುದೆಮ್ಮೈಸಿರಿ ಆಯುಸ್ಸು
ಇದು ಕೆಡೆ; ಅವರಿಂ ಹೋಗುವೆವೀಗ.
ಇನ್ನೆಮಗಿಲ್ಲಿರೆ ಏನುಪಯೋಗ ?

ಸೆಕ್ರೆಟರಿ

ಆದೊಡೆ ನಮ್ಮಂಥರಿಗೇನು ಗತಿ ?
ಕ್ಲೈವಿನಂತೆ ನಮಗೂ ಆತ್ಮಹತಿ ?

ರೆಸಿಡೆಂಟ್

ವಿಷಾದವೇತಕೆ, ಗೆಳೆಯ,
ಪ್ರಧಾನಿ ನಿಮ್ಮನು ಮರೆಯ.
ನಿಮ್ಮ ಹಿತಗಳಿಗೆ ಧಕ್ಕೆ ಬಾರದು.

ಸೆಕ್ರೆಟರಿ

ಆದೊಡೆ ಇಂದೆನಗೇನೂ ತೋರದು.

ಬಾಳುವುದಕ್ಕಿದು ಒಳ್ಳೆಯ ನಾಡು
ಇನ್ನು ಮೇಲೆ ಇಲ್ಲಿರುವುದೆ ಪಾಡು.
ದೊರೆಯಂತಿದ್ದೆವು ಇಂದಿನವರೆಗೂ
ನಮ್ಮರವೇ ಈ ಜನಗಳ ಬೆರಗು.
ಈಗಿಳಿದೆವು ಸಾಮಾನ್ಯನ ದರ್ಜೆಗೆ.
ಇನ್ನೇರೆವು ಈ ರಾಜನ ಸಜ್ಜೆಗೆ
ವರಪ್ರದಾಯಕ ದೇವರ ತೆರದಿ
ರಥದೋಟಕೆ ಬಹ ಬಿರುದಿನ ಭರದಿ.

ರೆಸಿಡೆಂಟ್

ದಿಟ ದಿಟ, ವಿಚಿತ್ರವಾ ಅನುಭೋಗ.
ರಾಜ್ಯದಾನೆಗಾನೇ ಮಾವಟಿಗ
ಎಂದುಕೊಳುತಿದ್ದೆ ಬಲು ವಿನೋದದಿ,
ದಿಟ್ಟಯು ಮೀರುವ ಆ ಜನ ಜಡಧಿ
ಭಯಭ್ರಾಂತಿಯಿಂದೆಮ್ಮ ಸಿಟ್ಟಿಸೆ
ವಜ್ರಪಾಣಿ ಇವನೆಂಪೆ ದಿಟ್ಟಿಸೆ.
ಎನಿತಪಾರವೀ ನೀರವ ಜನತೆ!
ಭಯವಿರಬಹುದು–ನಹಿ ನಹಿ ಮಮತೆ.
ವಿನೋದವೊಮ್ಮೆ—ವಿಷಾದವೊಮ್ಮೆ
ಭೀತಿಯೊಮ್ಮೆ ಮತ್ತೊಮ್ಮೆಗೆ ಹೆಮ್ಮೆ—
ಈ ರೀತಿಗೆ ಬಗೆ ಚಲಿಸುತಲಿತ್ತು.
ದೊರೆಯಾ ವೈಭವ ಆ ಸಂಪತ್ತು
ಪ್ರಜೆಯೀ ದೀನತೆ ಧೈರ್ಯವಿಹೀನತೆ—
ಒಂದಕೂ ಇಲ್ಲ ಮಾನವೀಯತೆ!
ಮೂಕಶೋಕದೀ ಮೆರುಗಿನ ಮುಸುಕು
ಸತ್ಯದೃಷ್ಟಿಯುಳ್ಳೆಲ್ಲರ ಮನಕು
ಜುಗುಪ್ಸೆಯಲ್ಲದೆ ಮೋದವ ತರುವುದೆ?
ಮೋದವೆನಗೆ ಈ ಪದವಿಯು ಬಿಡುವುದೆ.

**ಸೆಕ್ರೆಟರಿ**

ತಪ್ಪಿಸಿಕೊಳ್ಳಲು ಜವಾಬುದಾರಿಯ
ಹುಡುಕಿದಿರಯ್ಯಾ ನೀವೀ ದಾರಿಯು !

**ರೆಸಿಡೆಂಟ್**

ಏಳುಕೋಟಿ ನಲವತ್ತು ಕೋಟಿಯು
ಹೊರುವ ಭಾರ ಬಲು ಭಾರ ಕಂಡೆಯಾ !

**ಸೆಕ್ರೆಟರಿ**

ನಾವೇ ವಾಹನವೀ ಜನಕೆ ?

**ರೆಸಿಡೆಂಟ್**

ಅಷ್ಟಲ್ಲದೆ ಮತ್ತೇನೆಣಿಕೆ !
ಆರು ನಮ್ಮಷ್ಟು ಇವರ ಬಾಳನು
ಕೆದಕಿ ಬೆದಕಿ ಕಿತ್ತಿತ್ತಿ ಬೇರನು
ತಮ್ಮ ತುಸ ಮಣ್ಣ ಕುಂಡದೊಳಗಡೆ
ಬೆಳಸಲೆಳಸಿದರು ನೆನೆದ ಫಲ ಬಿಡೆ ?
ನಟ್ಟ ಗಿಡ ಸ್ವಲ್ಪ, ಕಿತ್ತವೋ ಬಹಳ,
ಬೆಳೆದವು ಸಿಂಗರಕಾದವು ಕೇವಲ.
ಅಣೆಕಟ್ಟಿನ ಜಲದುಪವನದಂತೆ—
ಅದರ ಹೆಸರು ಬೃಂದಾವನವಂತೆ—
ಇವರ ಜೀವನದೊಳೆಮ್ಮಯ ಬಿನದ.
ಇದರಿಂ ಜಗಕಪ್ಪುದು ತುಸಮೋದ.
ದಿಟ, ಆದೊಡೆ—
ಕಟ್ಟೆಯರಿವುದಾ ಜಲದೊತ್ತಡವ
ನಮ್ಮ ವೈರಿ ಈ ನಾಡಿನ ಬಡವ.

**ಸೆಕ್ರೆಟರಿ**

ನಮಗೀ ನಾಡಿನ ಕೂಲಿಯ ಭಯವೇ ?

ಅವನ ಜೀವನಕೆ ನಮ್ಮಯ ದಯವೇ
ಕಾರಣವಲ್ಲವೆ? ಲಕ್ಷ ಲಕ್ಷವನು
ಇಚ್ಛಿಸಿದ ಕ್ಷಣ ಕೊಂದೆವಲ್ಲವೇ?

ರೆಸಿಡೆಂಟ್

ಬಂಗಾಲದ ಕಂಗಾಲರನೊರೆವೆ.
ಪಾಪ ಪಾಪ, ಆದೊಡೆ ಇದ ಮರೆವೆ:
ಒಂದು ಸಾಯೆ ಬಳಿಕಾರು ಹೆರುವರು
ಜೀವ ಭದ್ರತೆಯ ಬಲ್ಲವರಿವರು
ಪ್ರಕೃತಿ ಇವರ ಪರ—ಮೃತ್ಯು ಮುಗಿಸದು
ಇವರ ಬಾಳ್ವ ಛಲವ—ಚೋದ್ಯವಿದು!

ಸೆಕ್ರೆಟರಿ

ಮೂಢ ಮಂದಿ, ಬದುಕೊಂದೇ ರೂಢಿ.

ರೆಸಿಡೆಂಟ್

ದಿಟ, ಬಲು ಜನ ಬೇಸತ್ತರು ಕಾಡಿ,
ಹೋಗುತ್ತಿಹೆವಾವೂ ಬಿಟ್ಟೋಡಿ.

ಸೆಕ್ರೆಟರಿ

ಅಡಿಗು ಕೋಡೆರಡಿತ್ತಾ ದೈವಕು ಕಡೆ ನಾವು
ಕಾಡಿನೊಳೀ ನಿಶ್ಶಸ್ತ್ರರ ಬಿಟ್ಟೋಡುತ್ತಿಹೆವು.

ರೆಸಿಡೆಂಟ್

ನಮ್ಮಯ ಭಯವೇ ತಪ್ಪಿರೆ ಇವಗಿನ್ನಾರ ಭಯ
ಧೃತಿ ಬಲಿತಿರುವೀ ಮಂದಿಗೆ ಎಂದಿಗು ವಿಜಯ.

ಸೆಕ್ರೆಟರಿ

ದಿಟ, ದಿಟ, ಸರ್ ಎಡ್ವರ್ಡ್ಸ್, ಒಪ್ಪಿದೆ ಈ ಜನಕೆ
ತಮ್ಮಯ ಭಯವೇ ತಮಗಿರೆ ಮತ್ತಾರ ಭಯ?
ದೇವರ ದಯದಿಂದಾಯಿತು ನಮಗೀ ಅಭಯ.

ಮೋವುಗಳೊದಗಿಸಲಾರದೆ ಸರ್ಕಸ್ಸಿನ ಒಡೆಯ
ಹಗ್ಗವ ಕಡಿಯುತ ಬೋನನು ತೆರೆಯುತ ಮುಗಿಸಿದ ಕತೆಯ

**ರೆಸಿಡೆಂಟ್**

(ನಗುತ್ತಾ)

ನಮಗಿದು ನೆಮ್ಮದಿ, ಜಗಕಿಪರಂಜಿಕೆಯಿಲ್ಲ.
ಗಾಂಧಿಯ ಗೆದ್ದೆವು—ಇನ್ನಾ ಕಿರುಕುಳವಿಲ್ಲ.
ಈಗೀ ದೇಶವನೊಡೆದಿಹೆವಿಬ್ಬಗೆಯಾಗಿ
ಒಬ್ಬರನೊಬ್ಬರು ಕರುಬಲು ಛಲದೊಳು ಬಲವನು ನೀಗಿ
ಬಲ್ಲವರಾರೀ ಜನ ಬಿಡುಗಡೆ ಬೇವನು ತಿಂದು
ನಮ್ಮೆಡೆಗೆಯೆ ಬಹುದೇನೋ ಇದೆ ಹದುಳೆಂದು.

**ಸೆಕ್ರೆಟರಿ**

ಉಹು, ಶರಣೆನ್ನರು ನಮಗಾ ವಿದ್ರೋಹಿಗಳು—

(ಕಿಟಕಿಯ ಕಡೆ ನೋಡಿ)

ಅಗೊ ಅಗೊ, ಬರುತಿಹರಿತ್ತೆಡೆ ನಮ್ಮೀ ತ್ರಾಹಿಗಳು.

**ರೆಸಿಡೆಂಟ್**

ಯಾರವರು ?

**ಸೆಕ್ರೆಟರಿ**

ಮುಸ್ಲಿಂ ಜನದೊಡೆಯ ಮತ್ತಾ ಹಿರಿಯ.

(ಸೇವಕ ಬಂದು ಭೇಟಿಯ ಚೀಟಿಯನ್ನು ಕೊಡುತ್ತಾನೆ. ಅದನ್ನು ರೆಸಿಡೆಂಟ್ ನೋಡಿ ಬರಹೇಳುವಂತೆ ಸಂಜ್ಞೆಮಾಡುತ್ತಾನೆ.

ಮುಸ್ಲಿಂ ಹಿರಿಯ ಮತ್ತು ಮುಸ್ಲಿಂ ನಾಯಕ ಬರುತ್ತಾರೆ. ಆದಾಬ್ ಸಾಹೇಬ್ ಇತ್ಯಾದಿ ಹಾರ್ದಿಕವಾದ ಸ್ವಾಗತಗಳು ನಡೆದ ಮೇಲೆ ಎಲ್ಲರೂ ಸುಖಾಸೀನರಾಗಿ ಸಲ್ಲಾಪಕ್ಕೆ ತೊಡಗುತ್ತಾರೆ.)

**ತಾಜಾಖಾನ್**

ಅಂತೂ ನೀವೀ ದೇಶವ ಬಿಟ್ಟು
ಹೊರಡುವಿರಿ. ಏನಿದರೊಳಗುಟ್ಟು ?

ಪಡಬಾರದ ಪಾಡುಗಳೊಳು ಬಿದ್ದು
ಎಂಥೆಂಥಾ ಶತ್ರುಗಳನೊ ಗೆದ್ದು
ನೀಗಿದಿರೇಕೀ ರಾಜ್ಯದಿ ಮಮತೆ?
ಜಗ ಬೆರಗಾಗಿದೆ ಸೋಜಿಗಪಡುತೆ!

**ರೆಸಿಡೆಂಟ್**

ಮಮತೆ ನೀಗಿಲ್ಲ, ಸಮತೆಗೆಳಸಿಹೆವು—
ನಿಮ್ಮ ಹದುಳವೇ ನಮ್ಮಯ ಹಿತವು.

**ರಾಜಾಖಾನ್**

ನೀವಿದನರಿತಿದ್ದರೆ ಸಂತೋಷ.

**ರೆಸಿಡೆಂಟ್**

ಯಾರ ಮೇಲು ನಮಗಿಲ್ಲವು ದ್ವೇಷ.

**ರಾಜಾಖಾನ್**

ಬೇಡುವ ಜನವೂ ಒಂದೇ
ಕಾಡುವ ಜನವೂ ಒಂದೇ ನಿಮಗೆ!
ನಿಮ್ಮನು ನೆಚ್ಚಿದರೇನು ಬಗೆ?

**ರೆಸಿಡೆಂಟ್**

ಏಕೀ ವಿಷಾದ ನೇಹಿಗರೇ?

**ರಾಜಾಖಾನ್**

ನಮ್ಮನು ಇಲ್ಲುಳಿಸನು ನಿಮ್ಮ ದೊರೆ.

**ರೆಸಿಡೆಂಟ್**

ಆತ ಧೀರ ಅಂತೆಯೆ ನ್ಯಾಯಪರ
ನಿಮ್ಮ ಜನವ ಮೆಚ್ಚುವನವ ಪೂರ.

**ರಾಜಾಖಾನ್**

ಮೆಚ್ಚಿಗೆ ಇರಲಿ, ನೆಚ್ಚಿಗೆ ಬೇಕು.
ನಮ್ಮನದುಮದಿದ್ದರಿವ ಸಾಕು.

ರೆಸಿಡೆಂಟ್

ನಮ್ಮಂಕುಶ ಇನ್ನಾಡದು ಇಲ್ಲಿ.

ತಾಜಾಖಾನ್

ಈ ಮಾತನು ನಂಬುವರಾರಿಲ್ಲಿ?

ರೆಸಿಡೆಂಟ್

ನಂಬಿರಿ ಬಿಡಿರಿ ನಿಜಸ್ಥಿತಿ ಇದು—
ಕಾಲದಂತೆ ನಡೆಯುವುದೊಳ್ಳೆಯದು.

ರಾಜಾಖಾನ್

ಯಾರ ಕಾಲವಿದು? ನಮ್ಮದಲ್ಲವೇ
ಆರ ರಾಜ್ಯವಿದು? ನಿಮ್ಮದಲ್ಲವೇ!
ನಮ್ಮದು ಕಾಲ ನಿಮ್ಮದು ದೇಶ
ನಡೆಯಲಿ ನಮ್ಮಿಬ್ಬರ ಆದೇಶ
ಇಲ್ಲೂ ಅಲ್ಲೂ ಎಲ್ಲೆಡೆಯಲ್ಲೂ.

ರೆಸಿಡೆಂಟ್

ಇಂತಾಗಿದೆ ಎಲ್ಲೆಲ್ಲೂ ಗುಲ್ಲು,
ದಿಟ, ಆದೊಡೆ ಈ ನಿಜವೇ ಬೇರೆ.
ಅಷ್ಟಕು ನಿಮ್ಮದೇನು ಫಿರ್ಯಾದು?

ರಾಜಾಖಾನ್

ಇದಿಗೋ—ಇದು ಇದು ಇದು.
(ಎಂದು ಪರವಾನೆಯನ್ನು ಕೈಗೆ ಕೊಡುತ್ತಾನೆ.)

ರೆಸಿಡೆಂಟ್

(ಓದಿ ಸಸ್ಮಿತನಾಗಿ)
ಇಲ್ಲೇನಿದೆ ದೂರಿಗೆ ಅವಕಾಶ?

ರಾಜಾಖಾನ್

ಬಿದ್ದಿದೆ ಕೊರಲಿಗೆ ಹಿಂದೂಪಾಶ!
ಇಲ್ಲೇ ಹುಟ್ಟಿದೆ ಇಲ್ಲೇ ಬೆಳೆದೆ
ಈ ನಾಡಿಗೆ ನಾ ಪರನೆಂತಾದೆ?
ಆದೊಡೆ ಮತ ಬೇರೆ ಹಿತ ಬೇರೆ
ಅವನುಳಿಸಿಕೊಳ್ಳದೇ ನಾ ಕೂರೆ.
ಹಿಂದೂ ಮೇಲಿನ ಮುಸ್ಲಿಮ ನಾನು
ಆವರಿಗೆ ಗುಲಾಮನೆಂತಾದೇನು?

ರೆಸಿಡೆಂಟ್

ಗುಲಾಮನಾಗೆಂದಾರು ಕರೆದರು?

ರಾಜಾಖಾನ್

ನಮ್ಮ ಹೀನೈಸಿ ಬದುಕುವರಾರು!
ಅಂತಲ್ಲ;
ಸಮಾನನೆಂದರು ಗುಲಾಮನಂತೆಯೆ.
ನಾನೋ ಹಿಂದೂ ಮೇಲಿನ ಮುಸ್ಲಿಮ—
ಇಂತಿರೆ ನಾನೆಂತಪ್ಪೆನು ತತ್ಸಮ?

ರೆಸಿಡೆಂಟ್

ದಿಟ, ಆದೊಡೆ ನಿಮ್ಮಾಶಯವೇನು?

ರಾಜಾಖಾನ್

ಅಲ್ಲಾಳಬೇಕು ಇಲ್ಲೇಳಬೇಕು
ಇದಕ್ಕೆ ನಿಮ್ಮಯ ಸಹಾಯ ಬೇಕು.

ರೆಸಿಡೆಂಟ್

ನಾವೇ ಬಿಟ್ಟೋಡುತ್ತಿಹೆವಲ್ಲಾ—
ನಮ್ಮ ನೆಚ್ಚಿ ಉಪಯೋಗವೆ ಇಲ್ಲ.
ನಮಗೂ ಪಾಕಿಸ್ತಾನಕೆ ಪಯಣ!
ಇನ್ನಿಡಿ ನೀವೂ ಅತ್ತೆಡೆ ಗಮನ.

ತಾಜಾಖಾನ್

ಇದುವೂ ಇಲ್ಲ ಅದುವೂ ಇಲ್ಲ
ಅಲ್ಲನೆ ಗತಿ ನಮಗೆ—ಇನ್ನಿಲ್ಲ.

ರಾಜಾಖಾನ್

ವ್ಯರ್ಥವಾಯಿತೇ ನಮ್ಮುಗ್ಗಡಣೆ
ಸಮರ್ಥವಾಯಿತೆ ಈ ಪರವಾನೆ ?

ತಾಜಾಖಾನ್

ಮೊದಲೇ ನಾನೆಚ್ಚರಿಕೆಯನಿತ್ತೆ
ನಮಗೀ ಹಗೆತನ ಬೇಡವೆನುತ್ತೆ.
ಈಗಲು ಕಾಲವು ಮೀರಿಲ್ಲ
ನಮಗೀ ಪರತನ ಲೇಸಲ್ಲ.

ರೆಸಿಡೆಂಟ್

ಕರಗಿ ಹೋಗುವಿರ ಈ ಸಾಗರದಿ ?

ತಾಜಾಖಾನ್

ಈ ಕಾಲಕೆ ನಮಗಿದುವೇ ನೆಮ್ಮದಿ.
ಕರಗಿದರೂ ಕಣಕಣದೊಳೆ ಇಹೆವು
ಇಂತಾದರೆಯೇ ನಮಗಿಹುದುಳಿವು.

ರೆಸಿಡೆಂಟ್

ಈ ಸಲಹೆಗೆ ನೀವೇನೆನುವಿರಿ ನಾಯಕರೆ?

ರಾಜಾಖಾನ್

ಈ ಕಡೆ ತೊಟ್ಟಿಲನೂ ತೂಗುವಿರಿ
ಆ ಕಡೆ ಮಗುವನ್ನೂ ಜಿಗುಟುವಿರಿ—
ಇನ್ನೀ ಬಿನದವ ಬಿಡಿ ನೇಹಿಗರೇ.

ಏನ ಗೈಯಬೇಕೋ ಅದ ಹೇಳಿ
ನಮ್ಮ ಮೇಲೆ ತುಸ ಕನಿಕರ ತಾಳಿ.

ರೆಸಿಡೆಂಟ್

ಬಿಡಿ ಕಳೆಯರಿ ನಿಮಗೇತಕೆ ಚಿಂತೆ—
ಮುಸ್ಲಿಂಜನಕಿಸ್ಲಾಮೇ ಹೆಚ್ಚು
ಹಿಂದುಗೆ ಹಿಂದೂ ಎಂದರೆ ಪೆಚ್ಚು.
ಪಾಕಿಸ್ತಾನವೊ ಮುಸ್ಲಿಂ ರಾಷ್ಟ್ರ
ಹಿಂದೂವಿಗಿಲ್ಲ ಹಿಂದೂ ರಾಷ್ಟ್ರ.
ಸಹನೆ ಸತ್ಯ ಅಹಿಂಸೆ ಸಮತೆ
ಎಲ್ಲಾ ಮತದೊಳು ನಮ್ರತೆ ಮಮತೆ
ಈ ತೆರ ಮಬ್ಬಾಗಿದೆ ಅವರ ಮತಿ.
ಬಹು ಜನಕಿದೆ ಕಾಂಗ್ರೆಸ್ಸಿನ ಕಿಂಕೃತಿ.
ನಿಮ್ಮ ಜನಕಿಲ್ಲ ಮಹಾತ್ಮವ್ಯಾಧಿ
ನಿಮಗಿದೆ ಪಾಕಿಸ್ತಾನದ ಗಾದಿ.
ಸರ್ಕಾರಕೆ ನಿರುಪದ್ರವರಾಗಿ ;
ಆದೊಡೆ ಸ್ವಪಕ್ಷದೊಳಗಿರಲಿ ಬಿಗಿ.
ಹಿಂಜರಿವೆವೀಗ ನಮ್ಮ ಹದುಳಕೆ
ಇದರಿಂ ತಪ್ಪದು ನಮ್ಮಯ ಬಳಕೆ
ಎಂದಿಗು ನಾವಿಹೆವೈ ಬೆಂಬಲಕೆ
ಕಾದಿರಿ ಪಾಕಿಸ್ತಾನದ ಫಲಕೆ.

ತಾಜಾಖಾನ್

ಹಾವೂ ಸಾಯದು ಕೋಲೂ ಮುರಿಯದು—
ನಮ್ಮ ನೆರೆಯ ನಂಬುವುದೊಳ್ಳೆಯದು.

ರಾಜಾಖಾನ್

ನೆರೆಯ ನಂಬುವೊಡೆ ಪಕ್ಷವೇತಕೆ ?

ತಾಜಾಖಾನ್

ಪಕ್ಷವಿಸರ್ಜನೆ ನಮ್ಮ ಹದುಳಕೆ.

ರೆಸಿಡೆಂಟ್

ಪಕ್ಷವುಳಿಯೆ ಮೇಲೇರುವುದೆಂತು ?

(ಜವಾನನು ತಂದ ಭೇಟಿಯ ಚೀಟಿಯನ್ನು ಸೆಕ್ರೆಟರಿ ಕೊಡುವನು. ರೆಸಿಡೆಂಟನು ನಕ್ಕು ಬರಹೇಳಿನುವನು—ಆಗ ಪಂಡಿತರ ಮತ್ತು ಯುವಕನ ಪ್ರವೇಶ. ಸ್ವಸ್ತಿ, ಸ್ವಸ್ತಿ; ಗುಡ್‌ಮಾರ್ನಿಂಗ್, ಗುಡ್ ಮಾರ್ನಿಂಗ್ ಸರ್; ನಮಸ್ಕಾರ, ನಮಸ್ಕಾರ, ದಯಮಾಡಿಸಿ ಪಂಡಿತರೆ; ಗುಡ್‌ಮಾರ್ನಿಂಗ್ ಪ್ಲೀಸ್; ಬಿ ಸೀಟೆಡ್; ಸ್ವಸ್ಥವೇ ಸಾಹೇಬರೇ; ಎಲ್ಲಾ ಅಲ್ಲಾ ದೇವರ ದಯ; ಇದ್ದರೆ ಸರಿ ಸಾಹೇಬರ ಅಭಯ—ಇತ್ಯಾದಿ ಸ್ವಾಗತಗಳು.)

ತಾಜಾಖಾನ್

ನಮಗೂ ನಿಮಗೂ ಎಂದಿಗು ಸ್ನೇಹ.

ಪಂಡಿತ

ದಿಟ ದಿಟ ದಿಟ, ಇದಕಿಲ್ಲ ಅಪೋಹ.
ವೇದಭೂಮಿಯೇ ಪಾಕಿಸ್ತಾನ
ನಮ್ಮಿಬ್ಬರಿಗೂ ಪುಣ್ಯಸ್ಥಾನ—
ದೊರೆ ಸಾಹೇಬರೆ, ನಿಮ್ಮ ರಕ್ಷಣೆ
ನಮಗೆ ತಪ್ಪಿತೇ? ದುಷ್ಟ ಶಿಕ್ಷಣೆ
ಶಿಷ್ಟಪಾಲನೆ ದೊರೆಗಳ ಧರ್ಮ—
ನಮಗೇ ಬಿಟ್ಟರ ನಮ್ಮಯ ಕರ್ಮ?

ರೆಸಿಡೆಂಟ್

ಪಂಡಿತರೇ,
ದೊರೆತನವನೆ ಬಿಟ್ಟೋಡುತ್ತಿಹೆವಲ್ಲ.

ಪಂಡಿತ

ನಿಮ್ಮೀ ಮರ್ಮವ ದೇವರೆ ಬಲ್ಲ.
ನಮಗೇನು ಗತಿ ಈಗದ ಹೇಳಿ.
ಬೀಸುತ್ತಿದೆ ಹೊಸಕಾಲದ ಗಾಳಿ!
ವೇದಶಾಸ್ತ್ರಗಳೆ ತೂರಿ ಹೋದವೊ
ವರ್ಣಾಶ್ರಮಗಳೆ ಹಾರಿ ಹೋದವೊ
ಹರಿಜನರಾದರೊ ಗುರುಜನರೀಗ?
ಹೇಳಿರಯ್ಯ ಹೇಳಿರಯ್ಯ ಬೇಗ.

(ಮುಸ್ಲಿಮರ ಕಡೆ ನೋಡಿ)

ನಿಮ್ಮವರಾಳಿದರ್ದೈ ಇಂತಲ್ಲ

(ರೆಸಿಡೆಂಟ್ ಕಡೆ ನೋಡಿ)

ನೀವಾಳಿದುದೂ ಈ ತೆರವಲ್ಲ
ನಮ್ಮವರಾಳುವ ಕಾಲವು ಬಂತೇ—
ಹಗಲಿರುಳೂ ನನಗಿದುವೇ ಚಿಂತೆ.

ರೆಸಿಡೆಂಟ್

ಏಕೆ ಪಂಡಿತರೆ ಈ ಉದ್ವೇಗ?

ಪಂಡಿತ

ಈ ರಾಜ್ಯದಿ ನಮಗೆಲ್ಲಿದೆ ಜಾಗ?

ರೆಸಿಡೆಂಟ್

ಸ್ವರಾಜ್ಯ ಬಂದರು ನಿರುತ್ಸಾಹವೇ
ನಮ್ಮಾಳಿಕೆಯೇ ನಿಮಗೆ ಹದುಳವೇ?
ನಿಮ್ಮವರೇ ಇದಕೆಲ್ಲಕು ಮೂಲ!

ಪಂಡಿತ

ಅದರಿಂದೆಮಗಿಲ್ಲ ಉಳಿಗಾಲ!

ಕುಲಕ್ಕೆ ಮೃತ್ಯು ಕೊಡಲಿಯು ಕಾವು
ಅವರಿಂದೊದಗಿತು ಮತಕೇ ಸಾವು.
ತಾವಾದರೊ ಬೇರೆಯ ಮತದವರು
ಆಗೆಮಗಿರಲಿಲ್ಲೀಗಿನ ಆಸರು.
ಸೀವಿತ್ತಿರಿ ಎಲ್ಲರಿಗೂ ಅಭಯ
ಎಲ್ಲರಿಗೂ ನಿಮ್ಮೊಳಗಿತ್ತು ಭಯ
ಧರ್ಮಸ್ವಾತಂತ್ರ್ಯವ ನೀಡಿದಿರಿ
ಎಲ್ಲೆಡೆಯೂ ಶಾಂತಿಯ ಹರಡಿದಿರಿ.

ರೆಸಿಡೆಂಟ್

ಅದು ನಿಮಗಿಲ್ಲವೆ ಈಗ ?

ಪಂಡಿತ

(ಯುವಕನನ್ನು ಕುರಿತು)

ಅಣ್ಣಯ್ಯಾ, ಅರ್ಜಿಯ ತೆಗೆ ಬೇಗ.
ಇಗೊ, ಇದನೋದಿರಿ ಪ್ರಭುಗಳೆ ನೀವು—
ವೈದಿಕರಿಗೆ ಇಲ್ಲೆಲ್ಲಿದೆ ಠಾವು ?

ರೆಸಿಡೆಂಟ್

(ಓದಿ, ರಾಜಾಖಾನನ ಕೈಗಿತ್ತು)
ಸಾಹೇಬರೆ ಕೌತುಕವಿದ ನೋಡಿ.
(ರಾಜಾಖಾನ್ ಓದಿ ನಗುತ್ತಾನೆ.)

ರಾಜಾಖಾನ್

ಹರಿಜನರೆಲ್ಲಿ ಗುರುಜನರೆಲ್ಲಿ !
ಒಂದೇ ಎಂದರೆ ಗೌರವವೆಲ್ಲಿ?
ವೇದದ ನಾಡೊಳು ಭೇದವೆ ಬೇಡವೆ
ಇಂತಾದೊಡೆ ದೇವತೆಗಳು ಕಾಡವೆ ?
ಶಿಷ್ಟಾಚಾರದ ಕಟ್ಟು ಸಡಿಲಲು
ದುಷ್ಟಾಚರಣೆಯೆ ಅಪ್ಪುದು ಮಿಗಿಲು ?

ಪಾಕೀಸ್ತಾನದೊಳೀ ತೆರವಿಲ್ಲ
ನಮ್ಮೊಂದಿಗೆ ಬನ್ನಿರಿ ನೀವೆಲ್ಲ.
ಅಲ್ಲಾವಿಗೆ ಮುಲ್ಲಾಗಳು ಎಂತು
ನಿಮ್ಮ ದೇವರಿಗೆ ನೀವೂ ಅಂತು.
ನಿಮ್ಮ ಧರ್ಮವನು ಪೊರೆವೆವು ನಾವು
ನಿಮಗಾಗದು ಕಿಂಚಿತ್ತೂ ನೋವು.

ತಾಜಾಖಾನ್

ನಮಗೇತಕೊ ಆ ರಾಜ್ಯಕೆ ಯಾತ್ರೆ ?

ರಾಜಾಖಾನ್

ನಮಗಿಲ್ಲಿದ್ದರೆ ಭಿಕ್ಷಾಪಾತ್ರೆ !

(ಇವರು ಈ ರೀತಿಯಲ್ಲಿ ಮಾತಾಡುತ್ತಿರುವಾಗ ಕಾಂಗ್ರೆಸ್ ಮತ್ತು ಕಾಂಗ್ರೆಸ್ ಸೋಷಿಯಲಿಸ್ಟ್ ಪಾರ್ಟಿ ಮುಖಂಡರ ಭೇಟಿಯ ಚೀಟಿಯನ್ನು ಜವಾನನು ತಂದು ತೋರಿ, ರೆಸಿಡೆಂಟ್ ಅಸ್ತು ಎಂದ ಮೇಲೆ ಒಳಕ್ಕೆ ಅವರನ್ನು ಪ್ರವೇಶಗೊಳಿಸುತ್ತಾನೆ—ಸ್ವಾಗತಗಳು ಸ್ವಲ್ಪ ಸಂಭ್ರಮವಾಗಿಯೇ ಜರುಗುತ್ತವೆ. ಗುಡ್ ಮಾರ್ನಿಂಗ್, ಆದಾಬ್ ಆದಾಬ್, ನಮಸ್ಕಾರ, ಸ್ವಸ್ತಿ ಇತ್ಯಾದಿ.)

ರೆಸಿಡೆಂಟ್

ಅನಿರೀಕ್ಷಿತವೈ ಶಮ್ಮಾಗಮನ !
ನಮಗಿದರಿಂದಾಯಿತು ಬಹುಮಾನ.

ಕಾಂಗ್ರೆಸ್ ನಾಯಕ

ಮಿತ್ರರೀಗ, ಅಭಿವಂದನಾರ್ಹರು.
ನಿಮಗೂ ಉಪಕಾರಿಗಳಿನ್ನಾರು ?
ವಂದನೆಯರ್ಪಿಸೆ ಬಂದಿಹೆವಿಂದು
ನೀವೀ ರಾಷ್ಟ್ರಕೆ ಆಪದ್‌ಬಂಧು.

ರೆಸಿಡೆಂಟ್

ದಿಟ, ದಿಟ ಮಿತ್ರರೆ,

ನಾವಿದ ಬಿಡುತಿಹುದೇ ಉಪಕಾರ !
ನಿಮ್ಮದಾಯ್ತಾಗ ಈ ಸರ್ಕಾರ.

ರಾಜಾ ಖಾನ್

(ರೆಸಿಡೆಂಟ್‌ಗೆ)

ನಿಮಗೂ ಉಪಕಾರಿಗಳಿನ್ನಾರು !

ಕಾಂಗ್ರೆಸ್ ನಾಯಕ

ಏಕೀ ವ್ಯಂಗ್ಯದ ನುಡಿ ಸಾಹೇಬರೆ ?

ರಾಜಾ ಖಾನ್

ನಿಮ್ಮ ರಾಜ್ಯವೀಗ, ನೀವೆ ದೊರೆ
ನಿಮಗೇ ಸರಿ ಇವರುಪಕಾರದ ಹೊರೆ.

ಕಾಂಗ್ರೆಸ್ ನಾಯಕ

ನಮ್ಮದೆ ರಾಜ್ಯ ? ನಿಮ್ಮದಲ್ಲವೆ ?
ನವಿಮ್ಮಾ ದೇಶದ ಪ್ರಜೆ ನೀವಲ್ಲವೆ ?
ನಮ್ಮೆಲ್ಲರ ರಾಜ್ಯವಿದು—
ಇಂತರಿಯುವುದೊಳ್ಳೆಯದು.

ರಾಜಾ ಖಾನ್

ಸಾಕೀ ಉಪದೇಶ.
ಏನಿದರುದ್ದೇಶ ?
ಇದು ಬೆದರಿಕೆಯಲ್ಲದೆ ಮತ್ತೇನು ?
ಕಾದಿಯಾದರೂ ನಾ ಸತ್ತೇನು
ನಿಮ್ಮಂಕೆಗೆ ತಲೆ ಬಾಗುವುದಿಲ್ಲ
ಬೆಂಬಲಕಿಹನಾ ಅಲ್ಲ.

ಕಾಂಗ್ರೆಸ್ ನಾಯಕ

ಅಂಕೆಯ ಮಾತೆ ಈ ಕಾಲದೊಳು ?

ನಾವೆಲ್ಲರಿಗೂ ಬಂಧುಗಳು.
ಅಹಿಂಸಾಚಾರ್ಯನೇ ನಮ್ಮ ಗುರು
ಸಮತಾ ಧರ್ಮವೆ ನಮ್ಮುಸಿರು
ಎಲ್ಲರ ಹಿತವೇ ನಮ್ಮ ಛಲ
ನಮ್ಮಾ ಸತ್ಯವ್ರತವಚಲ.

ಪಂಡಿತ

ನಾಸ್ತಿಕ ರಾಜ್ಯದಿ ಸತ್ಯದ ಮಾತೇ?

ಕಾಂಗ್ರೆಸ್ ನಾಯಕ

ನಾವು ನಾಸ್ತಿಕರೆ, ಪಂಡಿತರೆ?

ಪಂಡಿತ

ಅಪ್ಪಲ್ಲದೆ ಮತ್ತೇನು?—
ನಿಮಗಿದೆಯೇ ದೇವ ಬ್ರಾಹ್ಮಣ ಭಕ್ತಿ,
ಧರ್ಮದೊಳಾಸಕ್ತಿ?
ವರ್ಣಾಶ್ರಮವಿಲ್ಲದೆ ವೈದಿಕಮತವೆಲ್ಲಿ?
ಇಂದದು ಹುಡಿಗೂಡಿತು ಇಲ್ಲಿ.

ಕಾಂಗ್ರೆಸ್ ನಾಯಕ

ನಮ್ಮ ಮೇಲೆ ನಿಮ್ಮಾಕ್ಷೇಪಣೆ ಏನು?

ರೆಸಿಡೆಂಟ್

ಇದನೋದಿರಿ, ಗೆಳೆಯ.

ಕಾಂಗ್ರೆಸ್ ನಾಯಕ
(ಓದಿಕೊಂಡು)

ಅಯ್ಯೋ, ರಾಜಸಿಗೇಕೀ ಬುದ್ಧಿ,
ಹರಿಜನರಿಗೇಕೆ ಶುದ್ಧಿ?
ನಿಮ್ಮನ್ನೇತಕೆ ಪೀಡಿಸಬೇಕು?
ಶಾಸನ ಗೈದರೆ ಸಾಕು!

**ರಾಜಾಖಾನ್**

ದಿಟ, ಕಲ್ಮಾ ಒಂದೇ ಶುದ್ಧಿಯ ಮಂತ್ರ
ಮಿಕ್ಕದ್ದೆಲ್ಲ ಕುತಂತ್ರ.

**ಕಾಂಗ್ರೆಸ್ ಸೋಷಿಯಲಿಸ್ಟ್**

ಮರೆತಿರ ಪಾದ್ರಿಯ ಜ್ಞಾನಸ್ನಾನವ?

**ಪಂಡಿತ**

ಅಯ್ಯೋ, ನಿನಗೇಕೀ ಅಜ್ಞಾನವೊ ಮಾನವ?

**ಕಾಂಗ್ರೆಸ್ ಸೋಷಿಯಲಿಸ್ಟ್**

ಜಗತ್ತಿನಲ್ಲಿ ಅಜ್ಞಾನವಿಲ್ಲದೆ?
ಅವರವರಜ್ಞಾನವ ಕಾಪಿಡುವುದೆ
ರಾಜಧರ್ಮ—ಇಂತಲ್ಲವೆ ಪಂಡಿತರೆ?

**ರೆಸಿಡೆಂಟ್**

ನಮ್ಮದಾಯಿತು, ಇನ್ನಾರದೊ ಇಲ್ಲಿ!

**ಪಂಡಿತ**

ಇನ್ನಾರ ಮರುಳು ವಿಜೃಂಭಿಸುವುದೊ?

(ವಿಕಟಕವಿ ಪ್ರವೇಶಿಸುತ್ತಾನೆ ತಡೆಗಟ್ಟುವ ಜವಾನನನ್ನು ಹಿಂದಕ್ಕೆ ತಳ್ಳಿ.)

**ವಿಕಟಕವಿ**

ಪಂಡಿತರೇ, ಈ ಮರುಳನ ಮರುಳು.
ನಮಸ್ತೇ, ನಮಸ್ತೇ, ನಮಸ್ತೇ, ನಮಸ್ತೇ.
ರೆಸಿಡೆಂಟ್ ಸಾಹೇಬರೆ ನಿಮ್ಮ ನೋಡೆ, ನನಗೇತಕೆ ಚೀಟಿ?

**ರೆಸಿಡೆಂಟ್**

(ನಗುತ್ತಾ)

ಸ್ವಾಗತವಯ್ಯಾ, ಅನಿರೀಕ್ಷಿತವೀ ಭೇಟಿ.

**ವಿಕಟಕವಿ**

ಅರಸರಾಣತಿ—,

ಏನಿದು ಸಕಲ ಸದಸ್ಯ ಪರಿಷತ್ತು!
ಇದು ಯಾವ ಮಹಾತ್ಮನ ಮೊಹನತ್ತು?
ಕಾಂಗ್ರೆಸ್ ಮುಸ್ಲಿಂಲೀಗ್ ಮಹಾಸಭೆ
ಆಡುತಿಹುದು ರಾಜತಂತ್ರದಾವ ಹಬೆ?

ರಾಜಾ ಖಾನ್

ನಿನಗೇಕೀ ಗೊಡವೆ, ವಿಕಟಮಹಾಶಯ.

ವಿಕಟಕವಿ

ಎಲ್ಲರಿಗೂ ಸ್ವಸ್ತಿಯನೊರೆವುದೆ ನನ್ನಾಶಯ.

ಪಂಡಿತ

ಕಟುಕನಿಗೂ ಕುರಿಗೂ ಸ್ವಸ್ತಿಯು ಬಗೆ ಒಂದೇ?

ವಿಕಟಕವಿ

ಕಟುಕರು ಯಾರು? ಕುರಿ ಯಾರು? ಎಂದೆ!

ರೆಸಿಡೆಂಟ್

ಇದುವರೆಗೂ ನಾವು, ಮುಂದಕೆ ನೀವು.

ವಿಕಟಕವಿ

ಕಟುಕರೋ, ಕುರಿಗಳೋ?

ಕಾಂಗ್ರೆಸ್ ಸೋಷಿಯಲಿಸ್ಟ್.

ಕಟುಕುರಿಗಳು!

ವಿಕಟಕವಿ

ಎಂದರೆ?

ಕಾಂಗ್ರೆಸ್ ಸೋಷಿಯಲಿಸ್ಟ್

ಎಲ್ಲರಿಗೂ ಸ್ವಸ್ತಿ.
ಧೈರ್ಯವೆ ನಾಸ್ತಿ.

ತಮ್ಮವರಿಗೆ ಶಾಸ್ತಿ
ಮಿಕ್ಕರಿಗಾಸ್ತಿ.

ರಾಜಾಖಾನ್

ಅಂತಲ್ಲಂತಲ್ಲ.
ತಮ್ಮವರಿಗೆ ಆಸ್ತಿ
ನಮಗೋ ನಾಸ್ತಿ.

ಪಂಡಿತ

ನಮಗೋ, ನಾಸ್ತಿ ಮತ್ತೂ ಶಾಸ್ತಿ!

ವಿಕಟಕವಿ

ನಿಮ್ಮ ಹದುಳವನು ನೀವೇ ಹೇಳಿ.

ರಾಜಾಖಾನ್

ಆವನ ಕೈಲಿ?
ನೀನೇ ಪ್ರಧಾನಿ ವಿಕಟ?

ಕಾಂಗ್ರೆಸ್ ನಾಯಕ

ಇದು ಎಲ್ಲರಿಗೂ ಪ್ರಕಟ.

ರೆಸಿಡೆಂಟ್

ಇವರಿಗೆ ಬೇಕ್ಕೆ ಸತ್ಪ್ರಜೆಗೂ ಹೆಚ್ಚಿನ ಸೌಕರ್ಯ
ಇವರಿಗೆ ಬೇಕ್ಕೆ ಹರಿಜನರನು ಮಡಿಮಾಡದ ಕಾರ್ಯ
ಇವರಿಗೆ ಯಾವುದು ಬೇಕೋ ತಿಳಿಯದು ನನಗೆ
ನಾವಂತೂ ಹೊರಟಹೆವಯ್ಯಾ ಮನೆಗೆ.

ವಿಕಟಕವಿ

ಎನಗಿದು ತಲೆಗೆಟುಕದ ತೊಡಕು!
ಇದನೊಡೆಯಲು ಬೇಕ್ಕೆ ದೊರೆಗಳ ಚಮುಕು.
ಹೋ ಮರೆತೆ ಮರೆತೆ:
ಪ್ರಭು ಕಾದಿಹರಾ ಹೊಸಿಲೆಡೆ ಎನುತೆ.

ರೆಸಿಡೆಂಟ್

(ಗಾಬರಿಯಾಗಿ ಎದ್ದು ನಿಂತು)

ಸವಾರಿ ಚಿತ್ತೈಸಿಹುದೆ?

ವಿಕಟಕವಿ

(ಹೌದೆಂದು ಸಂಜ್ಞೆ ಮಾಡುವನು)

(ರೆಸಿಡೆಂಟ್ ಮತ್ತು ಸೆಕ್ರೆಟರಿ ಸಂಭ್ರಾಂತರಾಗಿ ಹೊರಕ್ಕೆ ಹೋಗುವರು. ಮಿಕ್ಕವರು ಮಿಕಮಿಕನೆ ನಿಲ್ಲುವರು. ರೆಸಿಡೆಂಟನೊಡನೆ ಮಹಾರಾಜನೂ ಅವರ ಹಿಂದೆ ಪ್ರಜಾನಾಯಕನೂ ಪ್ರಧಾನಿಯೂ ಕರ್ಟಿಸನೂ ಬರುತ್ತಾರೆ. ಜವಾನರು ಸಂಭ್ರಾಂತರಾಗಿ ಪೀಠಗಳನ್ನು ಸಜ್ಜುಗೊಳಿಸುತ್ತಾರೆ.)

ವಿಕಟಕವಿ

(ಮಹಾಸ್ವಾಮಿಯವರಿಗೆ ತಲೆವಾಗಿ ವಂದಿಸುತ್ತಾ)

ಪರಾಕ್— ಸ್ವಾಮಿ ಪರಾಕ್—ಎಚ್ಚರಿಕೆ
ಸ್ವಾಮಿ ಎಚ್ಚರಿಕೆ!

(ಎಂದು ಉದ್ಘೋಷಿಸುವನು. ದೊರೆ ದುರುಗುಟ್ಟಿಕೊಂಡು ನೋಡುವನು.)

ಕ್ಷಮಿಸಿರಿ ಬುದ್ಧಿ.
ಸಿಂಹದ ಗವಿಯನು ಹೊಕ್ಕಿಹಿರೆಂದೆಚ್ಚರಿಕೆ!

(ರೆಸಿಡೆಂಟರನ್ನು ನೋಡಿ)

ಎಚ್ಚರಿಕೆಯೊ ಬೆಚ್ಚರಿಕೆಯೊ?

ರೆಸಿಡೆಂಟ್

ನಮ್ಮಿಂದೆಚ್ಚರಿಕೆ—ಇವರಿಂ ಬೆಚ್ಚರಿಕೆ.

ದೊರೆ ಆ ಕಡೆ ನೋಡಲು ಪಂಡಿತರು ಸ್ವಸ್ತಿ ಎನ್ನುವರು. ಮಿಕ್ಕವರು ನಮಸ್ಕರಿಸುವರು.)

ದೊರೆ

(ರೆಸಿಡೆಂಟರಿಗೆ)

ಇಕೊ, ಈ ಹಿರಿಯರೆ ಜನನಾಯಕರು.
(ಆಮೇಲೆ ಪ್ರಧಾನಿಯನ್ನು ತೋರಿಸಿ)
ಈಗಳಿವರು ನಮ್ಮಾಪ್ತ ಸಚಿವರು.
ಇವ ವಿಕಟಕವಿ,
ನಮ್ಮ ಮೈತ್ರಿಯೇ ಈತನ ಪದವಿ.
(ಕೈಕುಲುಕುವರು.)
(ಸಾಮಾನ್ಯವಾಗಿ ಅಲಂಕರಿಸಿರುವ ಆ ಕೊಠಡಿಯನ್ನು ನೋಡಿ)
ಏನಿದು ಬಡತನದೊಳೆ ಇಹಿರಲ್ಲಾ!
ನಮಗಿದನೇತಕೆ ತಿಳುಹಿಸಲಿಲ್ಲ?

ರೆಸಿಡೆಂಟ್

ತಮ್ಮ ಸಿರಿಯಿಂದ ನಮ್ಮನಳೆವುದೆ?
ಅರಮನೆ ವೈಭವವಿದಕೆ ಸಲುವುದೆ?

ದೊರೆ

ಹಿರಿಯರ ಮಹಿಮೆ, ಪ್ರಜೆಗಳ ಒಲುಮೆ
ದೇವರನುಗ್ರಹ, ತಮ್ಮ ದಯ—
ಇಂತಿರೆ ವೈಭವಕೇನು ಭಯ?

ರೆಸಿಡೆಂಟ್

ನಮ್ಮ ದಯ! ಈ ಮಾತೀ ಕಾಲಕೆ ಹೆಚ್ಚು!

ದೊರೆ

ನಮ್ಮೆಲ್ಲರಿಗೂ ನಿಮ್ಮದೆ ನೆಚ್ಚು.
ಅಲ್ಲವೆ ಪಂಡಿತರೇ, ನಾಯಕರೇ?
(ತಾಜಾಖಾನ್ ರಾಜಾಖಾನ್ ಪಂಡಿತ ಒಟ್ಟಿಗೆ)
ಅಂತಲ್ಲಂತಲ್ಲ ಮಹಾಪ್ರಭು!

**ದೊರೆ**

ಮಾತೆ ನಡೆಯದಿರೆ ಎಂಥ ಪ್ರಭು ?
ಸಮ್ಮತಿಯೊಳು—ಶಾಸನದಿಂದಲ್ಲ
ಇನ್ನಾಳಿಕೆ—ತಿಳಿಯಿರಿ ನೀವೆಲ್ಲ.
ಸಮ್ಮತಿಗಾಗಲಿ ಶಾಸನ ಸಾಕ್ಷಿ.
ಇಂತಾದೊಡೆ ನಮ್ಮಾತ್ಮದ ಪಕ್ಷಿ
ಎಲ್ಲ ಮನದ ಬಾಂದಳದೊಳು ನಲಿವುದು
ತನ್ನ ಗೂಡೊಳೂ ಹದುಳದೊಳಿರುವುದು.
ತಾವಿದನೊಪ್ಪುವಿರಾ ಪಂಡಿತರೇ ?
ತಮ್ಮಭಿಮತವೇನಿದಕೆ ಹಿರಿಯರೇ ?
ನಮ್ಮ ಪರವಾನೆ ನಿಮಗೆ ರುಚಿಸಿತೆ ?
ನಿಮಗೆ ಹಿಡಿಸಿತೇ ಹರಿಜನಸಮತೆ ?

**ರಾಜಾಖಾನ್**

ಇಲ್ಲ ಪ್ರಭು—ಇಲ್ಲ ಪ್ರಭು
ಮುಸ್ಲಿಂ ಜನತೆಗೆ ಮಿತಹಿತ ಸಲ್ಲ.

**ಪಂಡಿತ**

ದ್ವಿಜಹರಿಜನ ಸಂಗತಿ ಲೇಸಲ್ಲ.

**ದೊರೆ**

ಪಂಡಿತರೇ,
ಸಾಮ್ರಾಜ್ಯದ ಗರ್ಭದ ಹೊರಬಂದು
ನಾವೆಲ್ಲರು ದ್ವಿಜರಾದೆವು ಇಂದು.
ಇನ್ನೆಲ್ಲಿಯದಂತ್ಯಜ ದ್ವಿಜಭೇದ ?
ಇರಲಾದೊಡೆ ನಿಮಗೇಕೆ ವಿಷಾದ—
ನಿಮ್ಮ ತನುಜರೀ ಕಜ್ಜಕೆ ನಿಲಲಿ
ನಿಮ್ಮ ಮಡಿವೋಹ ನಿಮ್ಮೊಳೆ ಇರಲಿ.
**(ರೆಸಿಡೆಂಟನ ಕಡೆ ನೋಡಿ, ಮುಸ್ಲಿಮರನ್ನುದ್ದೇಶಿಸಿ)**

ದಿಟ, ಈ ಮಂದಿಯ ಪಾಡೇ ಪಾಡು
ನಮಗರಿಯದು ಇವರಾತ್ಮದ ಜಾಡು
ಸ್ವಸ್ಥರಲ್ಲ ತಾಯ್ನಾಡಿನೊಳಿವರು
ಗತಕಾಲದಿ ಬಾಳ್ವೆಯನೂರಿಹರು.
ಮೃತಕಾಲವಲ್ಲ ಹೊಸಕಾಲವಿದು
ಹಿತಕೆಲ್ಲವ ಬಳಸುವ ಕಾಲವಿದು.
ವಿಜ್ಞಾನದಂತೆ ಮತವೂ ಕೂಡ
ಎಲ್ಲರ ಹದುಳಕ್ಕೊದಗಲು ಬೇಡ?
ಹಗುರ ಕೆಟ್ಟಿಹಿರಿ ಮನದೊಳು ನೀವು
ನಿಮ್ಮನು ಕಾಪಿಡುವೆವು ನಾವು.

**ರೆಸಿಡೆಂಟ್**

ಭಾಪು ಭಾಪು, ಬಹು ಒಳ್ಳೆಯ ಮಾತು.

**ತಾಜಾಖಾನ್**

ನಮಗೀ ಭರವಸೆ ಸಂತಸವಾಯ್ತು.
ನಾಯಕರೊಳು ನಂಬಿಕೆ ಇದೆ ಪೂರ
ಅವರ ಭಾವನೆಯೆ ಬಹಳ ಉದಾರ.

**ರಾಜಾಖಾನ್**

ಮಹಾಸ್ವಾಮಿ, ಪ್ರಜೆಯೆಂದೊಪ್ಪಿಹೆವೀಗ!
ಹಿತರಕ್ಷಣೆ ಶಾಸನವಾಗಲಿ ಬೇಗ.
(ದೊರೆ ಅಭಿನಂದಿಸುವಂತೆ ಹಸನ್ಮುಖನಾಗುವನು.)

**ವಿಕಟಕವಿ**

(ಕಾಂಗ್ರೆಸ್ ಸೋಷಿಯಲಿಸ್ಟನ್ನು ಉದ್ದೇಶಿಸಿ)
ಆದೊಡೆ ಸವಿನುಡಿಗೀ ತರುಣ ಜನ
ಸಗ್ಗುವಂತಿಲ್ಲ—ನೀವಿರಿ ಜತನ.
ದೊರೆ ಎಂದರೆ ಗುರ್ರೆನ್ನುವರಿವರು.

ದೊರೆ

ಈ ತರುಣರು ಗುರ್ರ್ರಿನದವರಾರು?
ಆದೊಡೆ ನಾಯಕರೇ, ನೀವುಂಟು ಇವರುಂಟು.
ನಾವೂ ರಾಜ್ಯವ ಬಿಡುತಿಹೆವೀಗ.
(ಎಲ್ಲರೂ ವಿಸ್ಮಿತರಾಗುವರು.)

ವಿಕಟಕವಿ

(ನಗುತ್ತಾ)
ರಾಮಚಂದ್ರನಿಗೂ ಮಿಗಿಲೀ ತ್ಯಾಗ.

ರೆಸಿಡೆಂಟ್

ಪ್ರಭು, ಏನಿದರ ರಹಸ್ಯ?

ದೊರೆ

ಭಾರತ ಪ್ರಾಂತಪ್ರಮುಖನ ಪದವಿ
ಬಂದಿದೆ ಮಿತ್ರರೆ ನಮಗೊದವಿ.
ನನ್ನಾರಿಕೆ ಎಂತಾಯಿತೊ ಕಾಣೆ
ಆರು ಹಾಡಿದರೊ ಈ ಸೋಬಾನೆ.
ಇದರ ಗುಟ್ಟನೀ ವಿಕಟನು ಬಲ್ಲ
ಆದೊಡೀತ ಬಾಯನೆ ಬಿಡಲೊಲ್ಲ.
ಡಿಲ್ಲಿಗೆ ಜತೆಯೊಳು ಬಂದ
ನಮಗುಚ್ಚಾಟನೆ ತಂದ.

ರೆಸಿಡೆಂಟ್

ಧನ್ಯವಾದವರ್ಪಿಸುವೆನು ದೊರೆಯೇ.

ದೊರೆ

ನೀವು ಮಿತ್ರರೆಂದೆಂದಿಗು ಮರೆಯೆ.

ನಿಮಗೀ ಸುದ್ದಿಯ ನಾವೇ ಹೇಳಿ
ನಿಮ್ಮಭಿಮತವನು ಕೇಳಿ
ಮುಂದಿನ ಕಾರ್ಯವ ಹವಣಿಸೆ ಬಂದೆವು.
ಒಪ್ಪಲೊ ಬಿಡಲೋ ಹೇಳಿರಿ ತಾವು.

**ರೆಸಿಡೆಂಟ್**

ಸಚಿವರಾಶಯು, ಪ್ರಭುಗಳ ಚಿತ್ತ.

**ದೊರೆ**

ಈ ಪದವಿಯೊಳೇನಿಹುದೋ ಕುತ್ತ ?

**ವಿಕಟಕವಿ**

ಕೆರೆ ಕಡಲಾಗುವ ಕುತ್ತ !

**ದೊರೆ**

ಸರಿಯಪ್ಪ, ವಿಕಟ, ಸರಿ !
ನೀ ಬಿಡೆ ನಾನಿದನೊಪ್ಪುವವರೆಗೂ.
ಅಸ್ತು, ಅಸ್ತು, ಸುದ್ದಿಯ ಸಾರಿರಿ ನಾಯಕರೇ.
ಮರೆಯದಿರಿ—ಅಲ್ಲಿದ್ದರು ನಾನಿಲ್ಲಿಯ ದೊರೆ!

**ಜನನಾಯಕ**

(ಆಶ್ಚರ್ಯದಿಂದ)
ತಾವೇತಕೆ ರಾಜ್ಯವ ಬಿಡಬೇಕು !

**ದೊರೆ**

ಇನ್ನೀ ಅರಮನೆ ಸೆರೆಮನೆ ಸಾಕು.
ನಾವಿಲ್ಲಿರೆ ಎಲ್ಲರಿಗೂ ಕಷ್ಟ;
ನಮಗೂ ಕಷ್ಟ, ತಮಗೂ ಕಷ್ಟ.
ಇದುವರೆಗಾಯಿತು ದೊರೆಯಧಿಕಾರ

ನಮ್ಮಾಜ್ಞೆಯಂತೆ ಈ ಸರ್ಕಾರ.
ಇನ್ನಿದ ಹೊಂದಿಸೆ ಪ್ರಜೆಯಾಣತಿಗೆ
ಸುಲಭವಹುದು ನಾವಿರದಿರೆ ತಮಗೆ.
ನಮಗೂ ಉಳಿವುದು ನಮ್ಮಭಿಮಾನ
ಪ್ರಜೆಗೂ ಹರಿವುದು ನಮ್ಮನುಮಾನ....

ಜನನಾಯಕ

ಆದೊಡೆ....

ದೊರೆ

(ಮಾತೆತ್ತಗೊಡದೆ)

ಕದಲಿಸೆವಯ್ಯಾ ಈ ನಿರ್ಧಾರವ
ಬೇರೆಯ ನಾಡೊಳು ನಮಗೀ ಗೌರವ
ಸಲ್ಲಲಿ—ಇದರಿಂ ತಮಗೂ ಮನ್ನಣೆ.
ಅಲ್ಲಿದ್ದರು ತಪ್ಪದು ನಮಗೀ ಹೊಣೆ!

(ರೆಸಿಡೆಂಟರನ್ನು ಕುರಿತು)

ದೊರೆಯನಿಲ್ಲಿ ಪ್ರತಿನಿಧಿಸುವಿರಾ, ಕೆಳೆಯ?

(ಎಲ್ಲರಿಗೂ ಆಶ್ಚರ್ಯ.)

ರೆಸಿಡೆಂಟ್

ತಮ್ಮ ವಿಶ್ವಾಸ, ಕೃತಜ್ಞ ನಾನು.
ಪ್ರಭುಗಳಾಣತಿಯನೆಂದಿಗು ಮೀರೆನು.
ಆದೊಡೆ ಪಯಣಕೆ ಸಜ್ಜಾಗಿಹೆನು.
ನನ್ನ ಬೀಳ್ಕೊಡಿ ಎಂದೆರೆಯುವೆನು.

ದೊರೆ

ತಮ್ಮ ಚಿತ್ತ—ನಮಗದೃಷ್ಟವಿಲ್ಲ
ಆಪ್ತಸಚಿವರೇ—

**ಆಪ್ತಸಚಿವ**

ನನಗೀ ಪದವಿಯೆ? ಉಹು ಲೇಸಲ್ಲ
ಪ್ರಜೆ ಏನೆನುವರು ನಾನಿಂತಾಗೆ?
ನಾನೂ ಬರುವೆನು ಪ್ರಭುಗಳೊಂದಿಗೆ
ನವಭಾರತನಗರಿಗೆ ನವದಿಲ್ಲಿಗೆ.

(ಹೀಗೆಯೇ ದೊರೆ ತಾಜಾಖಾನ್, ರಾಜಾಖಾನ್, ಕಾಂಗ್ರೆಸ್ ನಾಯಕ ಇವರನ್ನೆಲ್ಲಾ ಕೇಳುವಂತೆ ನೋಡುವಾಗ ಅವರು–ಅಯ್ಯೋ ಅಯ್ಯೋ ನಾವೆ ನಾವೆ—ಎಂದು ಹಿಂಜರಿದು ಬೇಡವೆನ್ನುವರು. ಜನ ನಾಯಕನನ್ನು ನೋಡಿ)

ಕೊನೆಗುಳಿದಿರಿ ನಾಯಕರೇ ನೀವು
ನಮ್ಮನ್ನು ಪ್ರತಿನಿಧಿಸಿರಿ ಈ ತಾವು.
ಅಸ್ತು ಎನ್ನಿರಿ—ಅನ್ನದೆ ಹೋದರೆ
ಒಲ್ಲೆ ಎನುವೆವಾ ದಿಲ್ಲಿಯ ಕರೆಗೆ.
ಒಪ್ಪುವರವರೂ ತಮ್ಮಾರಿಕೆಗೆ.

(ಕಾಂಗ್ರೆಸ್ ನಾಯಕರಿಗೆ)

ಪ್ರಧಾನಿ ನೀವಾಗಿರಿ ಕೆಳೆಯರೆ

(ಮುಸ್ಲಿಂ ನಾಯಕರಿಗೆ)

ನೀವೂ ಬೆಂಬಲಕಿರಿ ನಾಯಕರೇ.
ಪಂಡಿತರೇ, ಕೊಳ್ಳಿರಿ ಈ ದಾನ,
ನಿಮಗಗ್ರಹಾರ ಸಂವತ್ಸರಾಶನ.
ಇಷ್ಟಶಿಷ್ಯರಿಗೆ ವೇದವ ಕಲಿಸಿ
ಜಾತಿ ಮತ ಭೇದ ಮೋಹವ ಬಿಡಿಸಿ.

**ಪಂಡಿತ**

ಮನ್ನಿಸಿರಯ್ಯಾ ನಮಗಿದು ಬೇಡ
ಬೆರೆಯಲರಿಯೆವಾವೆಲ್ಲರ ಕೂಡ.
ಈ ಜಗ ಬೇರೆ ನಾವೇ ಬೇರೆ.

ಬಯಪೆವಯ್ಯ ಪಿತೃಗಳ ಜತೆ ಸೇರಿ.
ಕಾಶಿಗೊ ಕೇದಾರಕೊ ಹೋಗಿ
ಇರುವಷ್ಟು ದಿವಸ ಕರ್ಮವ ನೀಗಿ
ಮುಕ್ತಿಯ ಹಾರೈಸುವೆವೈ ಅಲ್ಲಿ.
ಹೋಹ ಮುನ್ನ ಶಿಷ್ಯಂದಿರಿಗಿಲ್ಲಿ
ನೇಮಿಸಿ ಹೋಹೆವು, ಜಾತಿಯೆಣಿಸದೆ
ಶ್ರದ್ಧೆಯುಳ್ಳರಿಗೆ ಪ್ರವಚಿಸಿ ಎಂದೆ.
ಸ್ವಸ್ತಿ, ಸ್ವಸ್ತಿ, ಸ್ವಸ್ತಿ.

(ಹೋಗುವನು.)

**ದೊರೆ**

ವೃದ್ಧರ ಬಗೆ ಬಲು ವೊರಟು
ವಿಕಟ, ನೀ ಹಿಂದೆಯೆ ಹೊರಟು
ಅವರನು ಸಂತೈಸು.

(ವಿಕಟ ಹೋಗುವನು.)

ಪಾಪ, ಪಾಪ. ಬಡಬ್ರಾಹ್ಮಣ ನೊಂದನೊ ಏನೊ?

(ರೆಸಿಡೆಂಟರ ಕಡೆ ನೋಡಿ)

ರಾಜಕೀಯದೊಳು ಮುಖ್ಯ ಕಾರ್ಯವನೆ
ಮರೆತೆವಯ್ಯ–ಇಕೊ ಆಮಂತ್ರಣೆ
ನಮ್ಮ ಮನೆಗೆ ಬಿಜಮಾಡಿಸಿರೆಂದು
ಸುಖಸಂಕಥೆಯೊಳಗಿರೋಣವೆಂದು.

**ರೆಸಿಡೆಂಟ್**

ಬಹುಮಾನಿತನಾದೆ ಪ್ರಭು.
ತಮ್ಮ ಸಾನ್ನಿಧ್ಯವೆ ಆನಂದ.
ತಾವೀ ರಾಜ್ಯಕೆ ಮರಳುವಿರೆಂದು?

**ದೊರೆ**

ಮಿತ್ರರೆ, ಈಗ ಸ್ವತಂತ್ರ ನಾನು

ನನಗಿದು ಗೂಡು ಅದುವೇ ಬಾನು.
ರಾಷ್ಟ್ರಕೆ ಬೇಕೆಲ್ಲರ ಸಹಕಾರ
ಆರಿಗು ಸಲ್ಲದೀಗ ಮಮಕಾರ.
ಹೊಸಕಾಲಕೆ ತಕ್ಕುದು ಹೊಸದೃಷ್ಟಿ
ಅದರಿಂದಲೆ ನವಭಾರತ ಸೃಷ್ಟಿ.
ಆರಿಗು ಪ್ರತ್ಯೇಕತೆ ಲೇಸಾಗದು
ಈಗೀ ಭಾರತವೆಲ್ಲಾ ನಮ್ಮದು.
ರಾಷ್ಟ್ರಕೂಟವಿಂದೆನ್ನಯ ಧ್ಯೇಯ
ಇದಕೆ ಬೇಡುವೆನು ದೈವ ಸಹಾಯ.

ರೆಸಿಡೆಂಟ್

ನಲ್‌ಗುರಿ ನಲ್ ಕಣಸು ನಲ್ ಮನಸು!
ಈ ಕನಸಾಗಲಿ ಬೇಗನೆ ನನಸು.

ಜನನಾಯಕ

ರಾಜ್ಯತಂತ್ರದೊಳು ತಾವು ನಿಪುಣರು.
ಸಮಷ್ಟಿದರ್ಶನ ರಹಿತರೆ ಕೃಪಣರು.
ಅರಸರೊಳಗೆ ತಮ್ಮಂಥರು ಸಿಕ್ಕರು
ಭಾರತದಧ್ಯಕ್ಷತೆಗೇ ತಕ್ಕರು.

ದೊರೆ

ಈ ಅಭಿಮಾನಕೆ ನಾವು ಬಾಧ್ಯರು.
(ರೆಸಿಡೆಂಟನ್ನು ಕುರಿತು)
ನಮ್ಮಾಲೇಸಿಗೆ ತಾವೇ ಆದ್ಯರು.
ಅಧ್ಯಕ್ಷತೆ ಸಿಕ್ಕಿದರೂ ಸಿಕ್ಕೀತೆ!
ಶುಭ ಶಕುನದ ತೆರ ಇಗೊ ಇಗೊ ಧ್ವಜಗೀತೆ.

**(ಈ ಸಮಯಕ್ಕೆ ದಳಪತಿ, ಐ.ಜಿ.ಪಿ., ಮಂತ್ರಿಗಳು, ಕವಿ, ಗಮಕಿ, ವಾದಿ, ವಾಗ್ಮಿ ಇತ್ಯಾದಿ ಸಾಮಾಜಿಕರೊಡನೆ ಕಾಂಗ್ರೆಸ್ ಯುವಕರು ರಾಷ್ಟ್ರಧ್ವಜವನ್ನು ಮೆರೆಸುತ್ತಿರಲು ವಿಕಟಕವಿ ಪ್ರವೇಶಿಸುವನು. ಗಮಕಿ ಹಾಡುತ್ತಾನೆ; ಮಿಕ್ಕವರು ಅದನ್ನು ಮರಳಿಸುತ್ತಾರೆ. ಧ್ವಜ ಬರುತ್ತಲೂ ಕುಳಿತವರೆಲ್ಲರೂ ಎದ್ದು ನಿಲ್ಲುತ್ತಾರೆ.)**

ಹಸುರು ಬಿಳುಪು ಕೇಸರೀ
ನಡುವೆ ಧರ್ಮಚಕ್ರ.
ಧ್ವಜವ ನಮಿಸುವೆವ್ಮ, ಧ್ಯೇಯ
ಆಗದಿರಲಿ ವಕ್ರ.

ಎತ್ತಿರಯ್ಯ ಈ ಧ್ವಜವ
ಆತ್ಮ ವಿಜಯ ಮೆರೆದಿರುವ
ಹಿಡಿದವರಂಜದೆ ನಿಲುವ
ಕಂಡವರೆದೆಗೆಡದಿರುವ
ಒಲಿದರು ಮಣಿವ
ದೀನರು ನಲಿವ
ಹಸುರು ಬಿಳುಪು ಕೇಸರೀ....

ಸಿರಿ ಸಮೃದ್ಧಿ ಹಸುರುಸಿರೆ
ಸಮರಸತೆಯು ಬಿಳಿಪುಸಿರೆ
ನಿಸ್ವಾರ್ಥವ ಕೇಸರೀ
ಧರ್ಮಚಕ್ರ "ಜಾಗ್ರತ" ಎನೆ
ಇದು ಹಾರುವ ಲಹರೀ—
ಹಸುರು, ಬಿಳುಪು ಕೇಸರೀ...

ಧೀರಾತ್ಮರ ಕಣಸಿದುವು
ಮಹಾತ್ಯಾಗ ಫಲವಿದುವು
ಈ ವಸ್ತ್ರವಲ್ಲರೀ.....
ಹಸುರು, ಬಿಳುಪು ಕೇಸರೀ . . .

ಕಣ್ಗೆ ಬಣ್ಣ ಎದೆಗೆ ಸಿರಿ
ಹಸುರು ಬಿಳುಪು ಕೇಸರೀ
ಇದಕೆ ತಸುವ ತೆತ್ತರಾತ್ಮ
ತೇಜದಿಂದ ಭಾಸುರೀ.
ಆ ಅಮರರಿಗಿದೆ ಬಾನು
ತವಸಿ ಪಡೆದ ಸುರಧೇನು

ಎಂತಿದ ಬಣ್ಣಿಸಲೇನು
ಇದಕೆಮ್ಮಯ ತನುಮನ
ಇದಕೆಮ್ಮಯ ನಮನ—
ಹಸುರು ಬಿಳುಪು ಕೇಸರೀ
ನಡುವೆ ಧರ್ಮಚಕ್ರ
ಧವಳ ಪಥದೊಳುರುಳುತಿರಲು
ಬಾಳಪ್ಪುದೆ ವಕ್ರ ?
ಹಸುರು ಬಿಳುಪು ಕೇಸರೀ....

(ಹೀಗೆ ಹಾಡುತ್ತಿರುವಾಗ ವಿಕಟಕವಿ ಆ ಬಾವುಟವನ್ನು ದೊರೆಯ ಕೈಗೆ ಕೊಡುವನು. ಆತ ಅದನ್ನೆತ್ತಿಕೊಳ್ಳಲು ಎಲ್ಲರೂ ಅದಕ್ಕೆ ಮಣಿಯುವರು. ಇದಾದಮೇಲೆ ದೊರೆ ಅದನ್ನು ವಿಕಟಕವಿಯ ಕೈಯಲ್ಲಿ ಕೊಟ್ಟು ತಾನು ಅದಕ್ಕೆ ನಮಸ್ಕರಿಸುವಾಗ ತೆರೆ ಬೀಳುವುದು. ತೆರೆ ಬಿದ್ದಮೇಲೂ ಹಾಡು ಕೇಳುತ್ತಿರುವುದು—ಹಸುರು ಬಿಳುಪು ಕೇಸರೀ ಎಂದು)

(ಅಂಕದ ತೆರೆ ಬೀಳುವುದಕ್ಕೆ ಮುಂಚೆ ವಿಕಟಕವಿ ಪ್ರವೇಶಿಸುತ್ತಾನೆ.)

ವಿಕಟಕವಿ

ವಂದನೆ ಅರ್ಪಿಸೆ ನಾನೇ ಬಂದೆ
ಎಲ್ಲರಿಗೂ ಲೇಸಾಗಲಿ ಎಂದೆ
ಕಾಲ ಕಾಲಕ್ಕೆ ಮಳೆ ಬೆಳೆಯಾಗೆ
ಬಡವ ಬಲ್ಲಿದರು ಭೇದವ ನೀಗೆ
ಸಿರಿಸರಸತಿಯರು ಜನದೊಳು ನೆಲಸೆ
ಸಿರಿಯಿಂದರಿವಿಂದೆಲ್ಲರ ತಣಿಸೆ.
ಸಂಪತ್ತಿಯೊಳೂ ಹರಿ ಮನಕೆ ಬರೆ
ಆಪತ್ತೊಳು ಪರಶಿವನಾಗೆ ಮರೆ
ಆಗಲಿ ಕರ್ಮರತಿ ಫಲವಿರತಿ
ಸ್ವಾತಂತ್ರ್ಯವುಳಿಯೆ ತಕ್ಕ ಜಾಗೃತಿ

ಭಯವುಳಿದಾಗಲಿ ಮನ ಸ್ವಚ್ಛಂದ
ವಿಜ್ಞಾನಕು ಹೃದಯದ ನಿರ್ಬಂಧ
ಪರಿಭವವಿಲ್ಲದೆ ನಾಡಿದು ಬೆಳಗೆ
ಇದರಾತ್ಮ ತೇಜವೆಲ್ಲೆಡೆ ತೊಳಗೆ
ಕನಸಿಗೆ ಕೂಡಲಿ ನನಸಿನ ಪೆಂಪು
ನನಸಿಗಾಗೆ ನಲ್ ಕನಸಿನ ಕಂಪು
ಎಲ್ಲ ಸೃಷ್ಟಿ ನರನಿಗೆ ನೆರವಾಗಿ
ತಿರೆಯಂ ನಡೆಸಲಿ ಶಿವಮುಖವಾಗಿ.
ಹರಕೆಯಿಡಿರಿನ್ನು ನಾ ಸಂನ್ಯಾಸಿ
ಯದುಗಿರೀಶನೆನ್ನೆದೆಯ ನಿವಾಸಿ.

ತೆರೆ.

ಸ್ವಸ್ತ್ಯಸ್ತು

---

# ಈ ಲೇಖಕರ ಇತರ ಕೃತಿಗಳು

---

| | | ಸಾದಾಪ್ರತಿ | ಕ್ಯಾಲಿಕೊ ಪ್ರತಿ |
|---|---|---|---|
| ರಾಮಾಚಾರಿಯ ನೆನಪು (ಗದ್ಯ ಚಿತ್ರಗಳು) | .... | ೧ ೪ | .... |
| ರಥಸಪ್ತಮಿ ಮತ್ತು ಇತರ ಚಿತ್ರಗಳು | .... | ೧ ೦ | ೨ ೦ |
| ಧ್ವಜರಕ್ಷಣೆ (ಕಥೆಗಳು) | .... | ೧ ೪ | ೨ ೪ |
| ಹಣತೆ (ಕವನಗಳು) | .... | ೧ ೪ | .... |
| ಮೂಂದಳಿರು (ಕವನಗಳು) | .... | ೧ ೦ | .... |
| ಶಾರದಯಾಮಿನಿ (ಕವನಗಳು) | .... | ೧ ೦ | ೧ ೧೨ |
| ಗಣೇಶದರ್ಶನ (ಕವನಗಳು) | .... | ೧ ೮ | ೨ ೮ |
| ಅಹಲ್ಯೆ (ಗೀತರೂಪಕ) | .... | ೨ ೪ | ೩ ೮ |
| ದೋಣಿಯ ಬಿನದ ಮತ್ತು ಕವಿ (ಗೀತರೂಪಕಗಳು) | .... | ೧ ೦ | .... |
| ಗೋಕುಲನಿರ್ಗಮನ (ಗೀತರೂಪಕ) | .... | ೧ ೦ | .... |
| ಶಬರಿ (ಗೀತರೂಪಕ) | .... | ೦ ೮ | .... |
| ಈಚಲಮರದ ಕೆಳಗೆ (ಪ್ರಬಂಧಗಳು) | | ಅಚ್ಚಿನಲ್ಲಿ | |

---

# ನಾಟಕಗಳು

**ಕುವೆಂಪು—**

| | | |
|---|---|---|
| ನನ್ನ ಗೋಪಾಲ | . | ೦ ೬ ೦ |
| ಬಿರುಗಾಳಿ | . . | ೧ ೪ ೦ |
| ರಕ್ತಾಕ್ಷಿ | . | ಪ್ರತಿಗಳು ಮುಗಿದಿವೆ |
| ಮೂರು ನಾಟಕಗಳು | . . . | ೧ ೧೨ [redacted] |
| ಶೂದ್ರತಪಸ್ವಿ ಮತ್ತು ಬಲಿದಾನ | . | ೧ ೫ [redacted] |
| ಬೆರಳ್‌ಗೆ ಕೊರಳ್ | . | ೧ ೧ |

**ಪು. ತಿ. ನರಸಿಂಹಾಚಾರ್—**

| | | |
|---|---|---|
| ಅಹಲ್ಯೆ | . . | ೨ ೪ ೦ |
| ದೋಣಿಯ ಬಿನದ ಮತ್ತು ಕವಿ | . | ೧ ೦ ೦ |
| ಶಬರಿ | . . | ೦ ೮ [redacted] |
| ಗೋಕುಲ ನಿರ್ಗಮನ | . . | ೧ ೦ ೦ |
| ವಿಕಟಕವಿ ವಿಜಯ | . . | ೨ ೪ [redacted] |

**ಆನಂದ—**

| | | |
|---|---|---|
| ದಹನ ಚಿತ್ರ | . . | ೦ ೮ ೦ |

**ತೀ. ನಂ. ಶ್ರೀಕಂಠಯ್ಯ—**

| | | |
|---|---|---|
| ರಾಕ್ಷಸನ ಮುದ್ರಿಕೆ | . . | ಪ್ರತಿಗಳು ಮುಗಿದಿವೆ |

**ಎ. ಎನ್. ಮೂರ್ತಿರಾವ್—**

| | | |
|---|---|---|
| ಆಷಾಢಭೂತಿ | . . | [redacted] |

ಕಾವ್ಯಾಲಯ : ಪ್ರಕಾಶಕರು : ಮೈಸೂರು